231

§ ಶ್ರೀ ಮದ್ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು. §

ಸದ್ಧರ್ಮಃ ಶರಣಂ

ಮಾನವ ಧರ್ಮಕ್ಕೆ
ಜಯವಾಗಲಿ



ಧರ್ಮದಿಂದಲೇ
ವಿಶ್ವಕ್ಕೆ ಶಾಂತಿ

## ಶ್ರೀ ಮದ್ ಉಜ್ಜಯಿನಿ ಸದ್ಧರ್ಮ ಸಿಂಹಾಸನಾ ಶಾಖಾ ಮರಡಿಮಠ ಗುಳೇದಗುಡ್ಡ.

# ಪರಮಪೂಜ್ಯ ಶ್ರೀ ಷ. ಬ್ರ. ಲಿಂ. ಕಾಡಶಿದ್ಧೇಶ್ವರ ಶಿವಾಚಾರ್ಯರ

Q;332ಲ
33M2B

# ...ರಿತಾಮೃತ

.... ಗ್ರಂಥ ಬಿಡುಗಡೆ ....

ಶ್ರೀ ಗಳವರ ೨೫ ನೇ ಪುಣ್ಯತಿಥಿ ಸಮಾರಂಭದ ಅಂಗವಾಗಿ
ಜರುಗಿಸಲಾದ ಶ್ರೀಮದ್ ಜಗದ್ಗುರು ಪಂಚಪೀಠಾಧೀಶ್ವರರ
ಅಡ್ಡ ಪಲ್ಲಕ್ಕಿ ಮಹೋತ್ಸವ : ದಿನಾಂಕ ೧೧–೫–೧೯೮೩

---

CC-0. Jangamwadi Math Collection. Digitized by eGangotri

ಸದ್ಧರ್ಮ : ಶರಣಂ



ಮಾನವ ಧರ್ಮಕ್ಕೆ ಜಯವಾಗಲಿ

ಧರ್ಮದಿಂದಲೇ ವಿಶ್ವಕ್ಕೆ ಶಾಂತಿ

## ಶ್ರೀ ಮದ್ ಉಜ್ಜಯಿನಿ ಸದ್ಧರ್ಮ ಸಿಂಹಾಸನಾ ಶಾಖಾ ಮರಡಿಮಠ ಗುಳೇದಗುಡ್ಡ.

# ಪರಮಪೂಜ್ಯ ಶ್ರೀ ಷ. ಬ್ರ. ಲಿಂ. ಕಾಡಸಿದ್ಧೇಶ್ವರ ಶಿವಾಚಾರ್ಯರ

# ❀ ಚರಿತಾಮೃತ ❀

.... ಗ್ರಂಥ ಬಿಡುಗಡೆ ....

ಶ್ರೀ ಗಳವರ ೨೫ ನೇ ಪುಣ್ಯತಿಥಿ ಸಮಾರಂಭದ ಅಂಗವಾಗಿ ಜರುಗಿಸಲಾದ ಶ್ರೀಮದ್ ಜಗದ್ಗುರು ಪಂಚಪೀಠಾಧೀಶ್ವರರ

ಅಡ್ಡ ಪಲ್ಲಕ್ಕಿ ಮಹೋತ್ಸವ : ದಿನಾಂಕ ೧೧-೫-೧೯೮೩

CC-0. Jangamwadi Math Collection. Digitized by eGangotri

ಮೊದಲನೇಯ ಮುದ್ರಣ : ೧೦೦೦ ಪ್ರತಿಗಳು



೧೯೮೩

Q:33 2 ಆ
33M2B

ಲೇಖಕರು ;

ಶ್ರೀ ನಿಂಗೇಶ ಬುಳ್ಳಾ

ಮುದ್ರಕರು : ಎಸ್. ಪಿ. ಚಿಂದಿ,
ಶ್ರೀ ಹುಚ್ಚೇಶ್ವರ ಪ್ರಿಂ. ಪ್ರೆಸ್, ಗುಳೇದಗುಡ್ಡ.

SRI JAGADGURU VISHWARADHYA
JNANA SIMHASAN JNANAMANDIR
LIBRARY.
Jangamwadi Math, VARANASI,
Acc. No. 718

CC-0. Jangamwadi Math Collection. Digitized by eGangotri

॥ ಶ್ರೀ ಮದ್‍ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥



ಶ್ರೀ ಲಿಂ, ಷ. ಬ್ರ, ಕಾಡಸಿದ್ಧೇಶ್ವರ ಶಿವಾಚಾರ್ಯ
ಮಹಾಸ್ವಾಮಿಗಳು ಮರಡಮಠ

CC-0. Jangamwadi Math Collection. Digitized by eGangotri

॥ ಶ್ರೀ ಮದ್‍ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥



**ಪರಮ ಪೂಜ್ಯ ಪ. ಬ್ರ. ಕಾಡಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು ( ಸದ್ಯದ ಮಠಾಧಿಪತಿಗಳು )**

CC-0. Jangamwadi Math Collection. Digitized by eGangotri



॥ ಶ್ರೀ ಜಗದ್ಗುರು ಪಂಚಾಚಾರ್ಯರ್ಾಃ ಪ್ರಸೀದಂತು ॥

ಶ್ರೀ ಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ

# ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರರುದ್ರಮುನಿ ದೇವ ಶಿವಾಚಾರ್ಯರ್ ಭಗವತ್ಪಾದರ ಶುಭಾಶೀರ್ವಾದ ಸಂದೇಶ

ಭಾರತ ಧರ್ಮಭೂಮಿ. ಸಾಹಿತ್ಯ ಸಂಸ್ಕೃತಿಯ ತವರೂರು. ಈ ನರ್ಮನಾಡಿನಲ್ಲಿ ಅನೇಕ ಶಿವಯೋಗಿಗಳು, ಶಿವಾಚಾರ್ಯರು, ಸಾಧು ಸಂತ ಸತ್ಪುರುಷರು ಅವತರಿಸಿ ಧರ್ಮದ ಬೆಳಗನ್ನು ಬೆಳಗಿದ್ದಾರೆ. ಧರ್ಮದ ಪರಾತ್ಪರ ಪರಮಾದರ್ಶ ತತ್ವಗಳನ್ನು ಅರುಹಲೆಂದೇ ಜನಿಸಿ ಬಂದವರವರು ಜಗದ ಕೊಳೆಯನ್ನು ಕಳೆದು, ಕಳೆಯನ್ನು ತುಂಬಿ ನೆಲೆನಿಂತವರು, .

ಮಾನವನ ಬಾಳಿನ ಬನದ ಚಿಗುರುವಿಕೆಗೆ ಅನೇಕ ಮಹಾನುಭಾವರು. ನಿತ್ಯ ಶ್ರಮಿಸಿ, ಚೈತನ್ಯವನ್ನು ತುಂಬಿರುವರು. ಅಸಾಧಾರಣವಾದ ಜ್ಞಾನಸುಧೆ ಯನ್ನು ನೀಡಿ ಉನ್ನತಿಯ ಮಾರ್ಗವನ್ನು ತೋರಿದ್ದಾರೆ. ನಾಡು ನುಡಿಗಾಗಿ ತಮ್ಮನ್ನು ತಾವು ಶ್ರೀಗಂಧದಕೊರಡಿನಂತೆ ತೆಯ್ದು ಸಮಾಜದ ಉದ್ಧಾರ ಗೈದಿರುವರು,

ಈ ಅಗ್ರಪಂಕ್ತಿಯಲ್ಲಿ ವಿಜಾಪೂರ ಜಿಲ್ಹೆಯ ಗುಳೇದಗುಡ್ಡದ ಶ್ರೀ ಮರಡಿಮಠವು ಒಂದು. ಇದು ಶ್ರೀ ಜ. ಉಜ್ಜಯಿನಿ ಸದ್ಧರ್ಮ ಪೀಠದ ಶಾಖಾಮಠವಾಗಿದೆ. ಶ್ರೀ ಮರಡೀಮಠದ ಪರಂಪರೆಯಲ್ಲಿ ಬಹಳ ಜನರು ತಪಸ್ವಿಗಳಾಗಿ, ಪೂಜಾವಂತರಾಗಿ ಪಟ್ಟಾಧಿಕಾರಿಗಳಾಗಿರುವರು, "ಕಾಡಸಿದ್ಧೇಶ್ವರ" ಎಂಬ ಅಭಿಧಾನದಿಂದ ಹೆಸರು ಪಡೆದ ಲಿಂ, ಶ್ರೀ ಷ. ಬ್ರ. ಕಾಡಸಿದ್ಧೇಶ್ವರ ಶಿವಾಚಾರ್ಯರು 1903 ರಂದು ಹುನಗುಂದ ತಾಲೂಕಿನ ಹಡಗಲಿ ಹಿರೇಮಠದ ಶ್ರೀ ಅಡವಯ್ಯ ಮತ್ತು ಸಿದ್ದಲಿಂಗಮ್ಮನವರ ಗರ್ಭದಲ್ಲಿ ಜನಿಸಿಬಂದರು. ಶ್ರೀ ಮಳಗಾವಿ ಹಾಗೂ ಶ್ರೀ ಚಿತ್ತರಗಿ ಶಿವಾಚಾರ್ಯರಿಂದ ಮರಡೀಮಠದ ಅಧಿಕಾರವನ್ನು ಪಡೆದರು.

CC-0. Jangamwadi Math Collection. Digitized by eGangotri

ಜನತೆಯ ಕಲ್ಯಾಣಕ್ಕಾಗಿ ತಮ್ಮನ್ನು ತಾವು ಅರ್ಪಿಸಿಕೊಂಡು ಜನ
ನಿಜದರಿವನ್ನು ನೀಡಿದರು. ತಮ್ಮ ಜೀವನದುದ್ದ ಬದುಕಿನಲ್ಲಿ ಬಂದ ಅ
ಎಡರು ತೊಡರುಗಳನ್ನು ಕಿತ್ತೊಗೆದು ಜನಮನಕ್ಕೆ ಧಾರ್ಮಿಕ ಚೇತನ
ತುಂಬಿ ಪ್ರಜ್ಞಾವಂತರನ್ನಾಗಿ ಮಾಡಿದರು. ಅವರು ಕಣ್ಮರೆಯಾದರೂ ಅ
ಅವ್ಯಕ್ತ ಶಕ್ತಿ ಎಲ್ಲ ಭಕ್ತ ಸಮುದಾಯವನ್ನು ಕಾಪಾಡುತ್ತಲಿದೆ. ಆ ಅ
ಶಕ್ತಿಯ ವ್ಯಕ್ತರೂಪವೇ ಇಂದಿನ ಶ್ರೀ ಷ. ಬ್ರ. ಕಾಡಸಿದ್ಧೇಶ್ವರ
ಚಾರ್ಯರು. ಇವರು ಮೌನ ಮುಗ್ಧರಾದರೂ ಹೆಚ್ಚು ಜನಪ್ರೀಯತೆಯ
ಪಡೆದವರು. ತಮ್ಮ ಗುರುಗಳ 25 ನೇ ಪುಣ್ಯತಿಥಿ ಬೆಳ್ಳಿಹಬ್ಬದ ನಿ
ಶ್ರೀ ಜಗದ್ಗುರು ಪೀಠಾಚಾರ್ಯರನ್ನು ದಯಮಾಡಿಸಿಕೊಂಡು ನ
ಮಠದ ಕಟ್ಟಡ ಉದ್ಘಾಟನೆ, ಶ್ರೀ ಜ, ಲಿಂಗೋದ್ಭವ ದಾರುಕರ ಮೂ
ಪ್ರತಿಷ್ಠಾಪನೆ ಮತ್ತು ಲಿಂ. ಶ್ರೀಗಳವರ ಚರಿತ್ರೆ ಬಿಡುಗಡೆಯ ಕಾ
ಕಲಾಪಗಳನ್ನು ಕಂಡು ಶ್ರೀ ಜ. ಸನ್ನಿಧಿಯ ಚಿತ್ತಕ್ಕೆ ಹೆಚ್ಚು ಸಂತೋ
ವನ್ನುಂಟು ಮಾಡಿದೆ,

ಲಿಂಗೈಕ್ಯ ಶ್ರೀಗಳವರ ಸಮಾಜಪ್ರೇಮ, ತ್ಯಾಗ ಭಾವನೆ, ಧಾ
ಪ್ರಜ್ಞೆ, ಪೀಠಾಭಿಮಾನದ ಕೆಚ್ಚು, ಕರ್ತವ್ಯಶೀಲತೆಗಳು ಎಲ್ಲರ ಬದು
ಒಡಮೂಡಿ ಬರುವಂತಾಗಬೇಕು, ಶ್ರೀಗಳವರ ಕೃತಿ ರಚಿಸಿದ ಬರಹ
ರಿಗೂ, ಪ್ರಕಾಶನ ಪಡಿಸಿದ ಶ್ರೀಗಳವರಿಗೂ ಮತ್ತು ಶ್ರೀ ಮಠದ
ಸದ್ಭಕ್ತ ಸಮುದಾಯಕ್ಕೂ ಶ್ರೀ ಜಗಜ್ಜನನೀ ಜನಕರಾದ ಶ್ರೀ ಪಾರ್ವತಿ ಪರ
ಶ್ವರರು ಹಾಗೂ ಶ್ರೀ ಜಗದ್ಗುರು ರೇಣುಕಾಚಾರ್ಯರು ಉತ್ತರೋ
ಮಂಗಲಪರಂಪರೆಯನ್ನು ಅನುಗ್ರಹಿಸಲಿ,

ಇತ್ಯಾನಂತಶಿವಾಶಿಷಃ
॥ ಸಮಸ್ತ ಸನ್ಮಂಗಳಾನಿ ಭವಂ

ಶ್ರೀ ಜ. ರಂಭಾಪುರಿ ಪೀಠ
ಬಾಳೆಹೊನ್ನೂರು-6-5-83



CC-0. Jangamwadi Math Collection. Digitized by eGangotri

॥ ಶ್ರೀ ರೇಣುಕಾದಿಪಂಚಜಗದಾರ್ಚಾಃ ಪ್ರಸೀದಂತು ॥

ಶಿವಸಾಹಿತಿಗಳಾದ ಮರಬದ ಶ್ರೀ ಷ. ಬ್ರ. ಗಂಗಾಧರ
ಶಿವಾಚಾರ್ಯ ಮಹಾಸ್ವಾಮಿಗಳವರ

# ಸದಭಿಪ್ರಾಯ

ನಮ್ಮೀ ಭಾರತದಲ್ಲಿ ಶಿವಾಚಾರ್ಯರು ಬಹುಕಾಲದಿಂದ ಆದರ್ಶಜೀವಿಗಳಾಗಿ ಪ್ರಕಾಶ ಮಾನರಾಗಿದ್ದಾರೆ. ಪೂಜನೀಯರಾಗಿದ್ದಾರೆ. ಕರ್ನಾಟಕದ ಬಹುತರ ನಗರ ಗ್ರಾಮಗಳಲ್ಲಿ ಅವರ ಕುರುಹನ್ನು ಒಂದೊಂದುರೀತಿಯಿಂದ ಮನಗಾಣಬಹುದು, ವೀರಶೈವ ಧರ್ಮದ ಧಾರ್ಮಿಕ ಕಾರ್ಯಕರ್ತರು ಶಿವಾಚಾರ್ಯರೇಆಗಿದ್ದಾರೆ ಈ ಚರಿತ್ರೆಯ ಮೂಲ ಗುರುವರ್ಯರು ಆಂಧ್ರ ದೇಶದಲ್ಲಿ ಜನಿಸಿ ಸಂಚಾರ ಮಾಡುತ್ತ ಕನ್ನಡ ನಾಡಿಗೆ ಬಂದು ನೆಲೆನಿಂದವರಾಗಿರುತ್ತಾರೆ, ಇವರು ಪಂಚಗುರುಪೀಠಗಳಲ್ಲಿ ಒಂದಾದ ಶ್ರೀ ಉಜ್ಜಯಿನಿ ಸದ್ಧರ್ಮಸಿಂಹಾಸನದ ಶಾಖಾನುವರ್ತಿಗಳಾಗಿ ಮುಂದುವರೆದಿದ್ದಾರೆ ಶಿವಯೋಗ ನಿಷ್ಠೆಯಲ್ಲಿ ನಿಡುಗಾಲ ನಿಂದು ನಿಬ್ಬೆರಗಾಗಿದ್ದಾರೆ "೧೨ ನೆಯ ಶತಮಾನದಲ್ಲಿ ನಡೆದ ಕಲ್ಯಾಣ ಕ್ರಾಂತಿಗಿಂತಲೂಮುನ್ನ ವೀರಶೈವ ಧರ್ಮಕ್ರಾಂತಿಯು ಶ್ರೀ ಶೈಲದಲ್ಲಿಯೇ ಸಂಭವಿಸಿತ್ತು. ಈ ಸಂಗತಿಯು ವೀರಶೈವೇತಿಹಾಸದಿಂದ ನಮಗೆ ಸ್ಪಷ್ಟವಾಗಿ ತಿಳಿಯಬರುವುದು. ಅಂತೆಯೇ ಶ್ರೀ ಶೈಲವು ಶರಣರಿಗೆ ಶರಣ್ಯವಾಯಿತು, ಗಣ್ಯವಾಯಿತು ಅಲ್ಲಮ, ಅಕ್ಕಮಹಾದೇವಿ ಮೊದಲಾದವರು ಇಲ್ಲಿಯೇ ತಮ್ಮ ಕೊನೆಗಾಲವನ್ನು ಕಳೆದವರಾಗಿರುತ್ತಾರೆ ಶ್ರೀ ಜಗದ್ಗುರು ರೇಣುಕಾ ಭಗವತ್ಪಾದರು ಶ್ರೀ .ಜಗದ್ಗುರು ಎಕೋರಾಮಾರಾಧ್ಯರು, ಶ್ರೀ ಜಗದ್ಗುರು ಪಂಡಿತಾರಾಧ್ಯರು ಮತ್ತು ಶ್ರೀಕರಭಾಷ್ಯಕಾರರಾದ ಶ್ರೀಪತಿ ಪಂಡಿತರು ಇತ್ಯಾದಿ ಮಹಾನುಭಾವರು ಆಂಧ್ರ ದೇಶದಲ್ಲಿಯೇ ಅವತರಿಸಿ ಬಂದವರಾಗಿದ್ದಾರೆ. ಇದು ಗಮನಾರ್ಹ ವಿಷಯ ಮುಂದೆ ಶ್ರೀಗುರು ಕಾಡ ಸಿದ್ಧೇಶ್ವರರ ಜೀವನ ಪರಿಚಯವೂ ಈ ಪುಟ್ಟಪುಸ್ತಕದಿಂದ ವಿವರವಾಗಿ ಗೊತ್ತಾಗುವದು ಅವರು ತಪೋಧನರೂ ಶರಣಾಗತ ರಕ್ಷಕರೂ ಎಂಬುದು ಸ್ಮರಣೀಯವಾಗಿದೆ.

CC-0. Jangamwadi Math Collection. Digitized by eGangotri

ಇಂದಿನ ಮಠಾಧಿಕಾರಿಗಳಾದ ಶ್ರೀ ಷ. ಬ್ರ. ಕಾಡಸಿದ್ಧ ಶಿವಾಚಾರ್ಯ ಮಹಾಸ್ವಾಮಿಗಳವರು ಸುಸ್ವಭಾವಿಗಳೂ ಭಕ್ತಜನ ಪ್ರೇಮಿಗಳೂ ಆಗಿರುವರು ಇದು ನಮಗೆ ಅತ್ಯಾನಂದವನ್ನುಂಟು ಮಾಡಿದೆ,

ಅವರು ಚಿಕ್ಕವರಾದರೂ ಕಾರ್ಯದಕ್ಷತೆಯಿಂದ ಹಿರಿಯರ ಪ್ರಶಂಸೆ ಪಾತ್ರ ರಾಗಿದ್ದಾರೆ ಇನ್ನೂ ಹೆಚ್ಚಿನಸೇವೆ ಪೂಜ್ಯ ಶ್ರೀಗಳವರಿಂದ ಸಮಾಜಕ್ಕೆ ಸಂದಾಯವಾಗಲೆಂದು ಹೃದಯಾರೆ ಆಶಿಸುತ್ತೇವೆ.

ಇತಿ-ಶಿವಮ್ !

ಮರಬದಮಠ ಗುಡೂರು

ದಿನಾಂಕ ೧೧-೨-೮೫

CC-0. Jangamwadi Math Collection. Digitized by eGangotri

ಶ್ರೀ ಗುರುಕೃಪಾ

# ಪೂರ್ವಾರ್ಧ

ಅನೇಕ ಶತಮಾನಗಳ ಪೂರ್ವದಿಂದಲೂ ಚಿನ್ನದ ನಾಡಾದ ನಮ್ಮೀ ಕರ್ನಾಟಕಕ್ಕೆ ತನ್ನದೇ ಆದ ದಿವ್ಯ ಸಂಸ್ಕೃತಿ ಇದೆ. ಭವ್ಯ ಪರಂಪರೆ ಇದೆ ಅದರಲ್ಲೂ ನಮ್ಮೀ ವಿಜಾಪೂರ ಜಿಲ್ಹೆ ಎಂದರೆ ಕನ್ನಡದೇವಿಯ ಹೃದಯಸ್ಥಾನ-ವೆಂದು ಹೇಳಿದರೆ ಅತಿಶಯೋಕ್ತಿ ಆಗಲಾರದು ಯಾಕಂದರೆ ಶಿವನ ಅಸ್ತಿತ್ವ-ವನ್ನೇ ಪ್ರಶ್ನೆಮಾಡುವ ಇಂದಿನ ವಿಜ್ಞಾನ ಯುಗದ ಬೌದ್ಧಿಕ ವಿಕಾಸ ಕಾಲದಲ್ಲಿ ಮಾನವನು ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಯಾವ ಕ್ಷೇತ್ರದಲ್ಲೂ ಸಂತೃಪ್ತಿಯನ್ನು ಹೊಂದದೆ ನಿರಾಶನಾಗಿ, ನಿಸಹಾಯಕನಾಗಿ, ಅಧೀರನಾಗಿದ್ದಾನೆ ಅನೀತಿಯನ್ನು ಅವಲಂಭಿಸಿದ್ದಾನೆ ಕ್ಷಣಿಕ ಸುಖದ ಬೆನ್ನು ಹತ್ತಿದ ಸಮಾಜದ ಜನತೆ ರಾಷ್ಟ್ರೀಯ ಮುಂದಾಳುಗಳು ಗತವೈಭವದ ನಮ್ಮ ನಾಡಿನ ಪ್ರಾತಃಸ್ಮರಣೆಯ ವ್ಯಕ್ತಿಗಳ ಬದುಕನ್ನು ಅರಿಯಬೇಕಾಗಿದೆ. ಅನೇಕ ಸಾಧನ ಸಿದ್ಧಿಗಳಿಂದ ಪ್ರಸಿದ್ಧರಾದ ಆದಿಪುರಷರ ಭವ್ಯಬಾಳನ್ನು ತಿಳಿಯಬೇಕಾಗಿದೆ. ಶರಣ ಶರಣೆಯರ ಆದರ್ಶಗಳನ್ನು ಅಳವಡಿಸಿಕೊಳ್ಳಬೇಕಾಗಿದೆ, ಮಹಾ ಮಹಾ ತಪಸ್ವಿಗಳ ಅನುಷ್ಠಾನ ಕೇಂದ್ರಗಳುಳ್ಳ ಈ ವಿಜಾಪೂರ ಜಿಲ್ಲೆಯೇ ಇಂದು ವಿಶ್ವ ಮಾನ್ಯವಾಗಿ ಬೆಳಗುತ್ತಿದ್ದ ವೀರಶೈವ ಧರ್ಮೋದ್ಧಾರಕ ಭಕ್ತಿಭಾಂಡಾರಿ ಬಸವಣ್ಣನವರ ಜನ್ಮ ಭೂಮಿಯಾಗಿತ್ತು, ಎಂಟುನೂರು ವರ್ಷಗಳ ಹಿಂದೆ ಕಲ್ಯಾಣದಲ್ಲಿ ಬೌದ್ಧಿಕ ವಿಕಾಸದ ಪೂರ್ಣಯೋಗದ ಪ್ರಯೋಗ ಶಾಲೆ ಅನುಭವ ಮಂಟಪವಾಗಿತ್ತು ಕರ್ನಾಟಕದ ಆದಿ ಕವಿ ಪಂಪನಾದರೆ ಅಭಿನವಪಂಪ ನಾಗಚಂದ್ರ ಕವಿಕೂಡಾ ವಿಜಾಪೂರದವನೆ ಕುಮಾರ ವಾಲ್ಮೀಕಿ ಎನಿಸಿದ ನರಹರಿ ಗದಾಯುದ್ಧ ರಚಿಸಿ ಕವಿಚಕ್ರವರ್ತಿ ಎನಿಸಿದ ರನ್ನ ಇವರೆಲ್ಲರ ಹೆಗ್ಗಳಿಕೆಯನಾಡು ನಮ್ಮ ಬಿಜಾಪೂರ ಜಿಲ್ಹೆ ಅದಲ್ಲದೆ ವಿಶ್ವಕವಿ ರವೀಂದ್ರನಾಥರು ಕಟ್ಟಿದ ಭಾರತದ ಶಾಂತನಿಕೇತನದಂತೆ ಕನ್ನಾಡಿನ ಬನಶಂಕರಿ ಹಾಗೂ ಮಹಾಕೂಟಗಳ ನೈಸರ್ಗದ ಸುಂದರ ಸ್ಥಾನದಲ್ಲಿ ಶಿವ-ಯೋಗದ ದಿವ್ಯಾಶ್ರಮಕ್ಕೆ ಸೂಚಿಸಿದ ಇಲಕಲ್ಲಿನ ಶ್ರೀ ವಿಜಯಮಹಾಂತ

CC-0. Jangamwadi Math Collection. Digitized by eGangotri

ಸ್ವಾಮಿಗಳ ಸಂಕೇತವಂತೆ ಹಾನಗಲ್ಲ ಕುಮಾರಸ್ವಾಮಿಗಳಿಂದ ಪ್ರಾರ್ಣಗೊಂ
ಶಿವಯೋಗ ಮಂದಿರವೂ ಕೂಡಾ ನಾಡಿನ ನಾಲ್ಕೂ ನಿಟ್ಟಿನವರನ್ನು ಜಾಗೃ
ಗೊಳಿಸುವ ಜ್ಯೋತಿರ್ಮಯ ಕೇಂದ್ರವಾಗಿದೆ. ಇಷ್ಟೇ ಅಲ್ಲ ಕನ್ನಡ ಸಾಹಿ
ಲೋಕಕ್ಕೆ ಆಡುನುಡಿಯ ಅನುಭವಿಕ ಜನಪದ ಸಾಹಿತ್ಯವನ್ನೊದಗಿಸಿ ವೈಶಿ
ಪೂರ್ಣವೆನಿಸಿಕೊಂಡಿದೆ. ನಮ್ಮೀ ವಿಜಾಪೂರಜಿಲ್ಹೆ ಈ ರೀತಿಯಾಗಿ ತನ್ನ
ಆದ ಧ್ಯೇಯ ಧೋರಣೆಗಳನ್ನು ಈ ನೆಲದ ನೈಸರ್ಗಿಕ ಗುಣಕ್ಕೆ ಹೊಂದಿಕೊಂ
ತನ್ನತನವನ್ನು ಬೇರೂರಿಸಿಕೊಂಡ ನಾಡು ಸುಮಾರು ೧೫೦ ವರ್ಷಗಳ ಹಿ
ಮಹಾತಪಸ್ವಿಗಳ ಬರುವಿಕೆಗಾಗಿ ಹಾರೈಸುತ್ತಿತ್ತು. ಕಲ್ಯಾಣದಲ್ಲಿ ಕ್ರಾಂತಿಯಾ
ವೀರಶೈವ ಸಿದ್ಧಾಂತದ ಷಟಸ್ಥಲದ ಆಚರಣೆಯು ನಶಿಸಿಹೋದುದನ್ನು ಬದು
ತೋರಿಸುವ ದಾರ್ಶನಿಕ ಶಿವಯೋಗಿಗಾಗಿ ಹಂಬಲಿಸುತ್ತಿತ್ತು. ಪರವಸ್ತು
ಶಿವಸ್ವರೂಪದಲ್ಲಿ ಒಂದಾಗಿ ಚಂದಾಗಿ ಹೇಗೆ ಬಾಳಬೇಕೆಂಬುದನ್ನು ಲಿಂಗಾ
ಸಂದಾನದಿಂದ ಆಚರಿಸಿ ಅನುಗ್ರಹಿಸಬಲ್ಲ ಆಚಾರನಿಷ್ಠ ಶಿವಾಚಾರ್ಯ
ಆಗಮನಕ್ಕಾಗಿ ಕಾಯುತ್ತಲಿತ್ತು

ಆ ಸಮಯದಲ್ಲಿ ಸಿದ್ಧೇಶ್ವರಶಿವಾಚಾರ್ಯ ಮಹಾಸ್ವಾಮಿಗಳು ಆಂ
ಪ್ರಾಂತದ ಕಡಪಾಜಿಲ್ಲೆಯ ದಂಡಗುಂಡಿ ಗ್ರಾಮದ ಹಿರೇಮಠದವರು ಶಾ
ವರ್ತಿಗಳು ದಂಡಗುಂಡಿ ಗ್ರಾಮಕ್ಕೆ ಅಚ್ಚು ಮೆಚ್ಚಿನವರಾಗಿದ್ದರು ವ್ಯಕ್ತಿ
ಬಾಳ ಕೇವಲ ತಮ್ಮ ಆತ್ಮೋದ್ಧಾರಕ್ಕಾಗಿ ಮೀಸಲಾಗಿರದೇ ಲೋಕೋದ್ಧಾ
ಕಾರ್ಯವೂ ನಡೆಯಬೇಕು. ಮಮಕಾರದಲ್ಲಿ ಓಲಾಡುವ ಲೋಕಜೀವಿ
ಮಾಯದ ಮದವನ್ನು ಮುರಿಯಬೇಕಾಗುತ್ತದೆ. ಕಾಯದೊಳಿದ್ದ ಕತ್ತಲೆಯ
ಕಳೆಯಲು ಎಂಥ ಪರಿಶ್ರಮವಾದ ಕೆಲಸಕ್ಕೂ ಟೊಂಕಕಟ್ಟಿ ನಿಲ್ಲಬೇಕಾಗುತ್ತ
ಆ ದಿಶೆಯಲ್ಲಿ ಶಿವಾಚಾರ್ಯ ಮಹಾಸ್ವಾಮಿಗಳು ದಂಡಗುಂಡಿ ಗ್ರಾಮ
ವೀರಶೈವ ತತ್ವಗಳನ್ನು ಸವಿಸ್ತಾರವಾಗಿ ಪ್ರಸಿದ್ಧ ಪಡಿಸಿದರು. ಲಿಂಗಿ
ಲಿಂಗಾನುಸಂಧಾನ ಪಂಚಾಚಾರ ಷಟಸ್ಥಲ ಅಷ್ಟಾವರಣ ಎಲ್ಲವಿಧಿ ವಿಧಾನಗ
ಗ್ರಾಮಸ್ಥರಿಗೆಲ್ಲಾ ಪೂಜಿತರಾಗಿದ್ದರು. ರಾಚೋಟೇಶ್ವರನ ದೇವಸ್ಥಾನ
ಮಹತ್ವವನ್ನು ತಂದುಕೊಟ್ಟಿದ್ದರು. ಅಂತ ಮಹಾತ್ಮರ ಆಗಮನಕ್ಕಾಗಿ ವಿಜಾ
ಜಿಲ್ಹೆಯ ಜನರ ಕೂಗು ಅವರ ಹೃದಯ ತಟ್ಟಿರಬೇಕು. ಇಲ್ಲವೆ ಪವಿತ್ರ ಸ್ಥ
ವಾದ ಬಸವಣ್ಣನವರ ಐಕ್ಯಸ್ಥಾನವಾದ ಕೂಡಲಸಂಗನ ಶ್ರೀಕ್ಷೇತ್ರವ ಆ
ಮನಮುಟ್ಟಿ ಕರೆದಿರಬೇಕು. ಅಂತೂ ಚೈತನ್ಯಮೂರ್ತಿಗಳು ಸಂಚಾರ ಮಾಡ

CC-0. Jangamwadi Math Collection. Digitized by eGangotri

ಬಂದರು. ಸಂಗಮೇಶ್ವರನ ಶ್ರೀ ಕ್ಷೇತ್ರದರ್ಶನದಿಂದ ಹರ್ಷಿತರಾದರು. ಅಲ್ಲಿ ಬಸವಣ್ಣನವರ ಗುರುಗಳಾದ ಶ್ರೀ ಜಾತವೇದಿ ಮುನಿಗಳವರ ಮಠವನ್ನೂ ಸಂದರ್ಶಿಸಿದರು. ಪರಮ ಪೂಜ ಜಾತವೇದಿ ಮುನಿಗಳವರ ಕಾರ್ಯಕ್ಷೇತ್ರವೂ ಬಸವಣ್ಣನವರ ಶಿಕ್ಷಣ ಕ್ಷೇತ್ರವೂ ಆದ ಸಂಗಮಕ್ಷೇತ್ರವನ್ನು ಮರಳಿ ಮರಳಿ ನೆನೆಯುತ್ತ ಅಲ್ಲಿಯೇ ಕೆಲದಿವಸ ಕಳೆದು ತಮ್ಮ ಶಿಷ್ಯನಾದ ಜಂಗಮಯ್ಯನೊಡನೆ ಗಂಜೀಹಾಳ ಮಾರ್ಗವಾಗಿ ಮುಳಗಾವಿಗೆ ಬಂದರು. ಆ ಮೂಲಕವಾಗಿ ಸಾನಿಧ್ಯಕ್ಕೆ ಬಂದರು. ನೋಡು ನೋಡುವಷ್ಟರಲ್ಲಿ ಗ್ರಾಮನಿವಾಸಿ ಗೌಡರ ಮನೆಯ ಜೀತದಾಳು ತನ್ನ ಹೆಂಡತಿಯೊಂದಿಗೆ ಹೊಡೆದಾಡುತ್ತ ಅವಳನ್ನು ಹೊಳೆಯಲ್ಲಿ ಜಲಸಮಾಧಿ ಮಾಡಲು ಎಳೆದು ತರುತ್ತಿದ್ದನು. ಶಿಷ್ಯನಾದ ಜಂಗಮಯ್ಯನು ಪೂಜ್ಯರಿಗೆ ಹೇಳಿದ, 'ಏನ್ರಿ ಬುದ್ಧಿ ಊರಲ್ಲಿ ಕಾಲಿಡುವ ಮೊದಲೆ ನಮ್ಮ ಕಣ್ಣಿಗೆ ಇದೇನ್ರಿ ಕಾದಾಟದ ಅಪಶಕುನಾ' ಎಂದು ಕೇಳಲು ಶಿವಾಚಾರ್ಯರು ನಕ್ಕು 'ಜಂಗಮಯ್ಯಾ ನಾವು ಶರಣರು ಅಪಶಕುನಗಳಿರಲಿ ಶುಭಶಕುನಗಳಿರಲಿ ಎಲ್ಲವನ್ನೂ ಎದುರಿಸುವ ಎದೆಗಾರಿಕೆಯುಳ್ಳವರು ನಡೆ ಮೊದಲು ದಂಪತಿಗಳಿಗೆ ಸಮಾಧಾನ ಮಾಡುವಾ ಎಂದು ಹೇಳಿ ಆ ದಂಪತಿಗಳಿಗೆ "ಏನಯ್ಯಾ ನೋಡಲಿಕ್ಕೆ ನೀವಿಬ್ಬರು ದಂಪತಿಗಳಂತೆ ಕಾಣುತ್ತೀರಿ, ಹೊಡೆದಾಡುತ್ತ ಬಡಿದಾಡುತ್ತ ಏನೋ ದುರಂತಸ್ಥಿತಿಯನ್ನು ಹವಣಿಸುತ್ತೀರಿ. ಛೇ ಇದು ನಿಜವಾದ ದಾಂಪತ್ಯ ಜೀವನವಲ್ಲ ಗಂಡಹೆಂಡರ ಜಗಳವೆಂದರೆ ಗಂಧತೀಡಿ ದಂತಿರಬೇಕು" ಎಂದು ಸಂತೈಸುವಷ್ಟರಲ್ಲಿ ವಾಚಾಳಿಯಾದ ಅವನ ಹೆಂಡತಿಯು ಹಮ್ಮಿನಿಂದ 'ಬಿಡ್ರಿ ಬಿಡ್ರೀ ಇವಾ ಏನ ಮಣಿಸ್ಯಾನಾ ಜೀತದಾಳಾಗಿ ತಾ ಒಬ್ಬರ ಮನ್ಯಾಗ ದುಡಿದು ರಾತ್ರಿ ಹೊತ್ತು ಸಿಕ್ಕಾಪಟ್ಟೆ ಕುಡಿದು ಬಂದು ನನಗ ಹೆದರ್ಸಿ ಬೆದರ್ಸಿ ಕೂಳು ತಿಂದು ಮತ್ತ ನನಗ ಏನಕೇನಾರ ನೀತಿ ಹೇಳಿದರ ನಾಕೇಳೂವಾಕೀನ ಅಲ್ರಿ ಸೀತಾನಂಗ ಹೇಣ್ತಿ ಇರಬೇಕನ್ನೂವ ಗಂಡಸ್ರೂರು ತಾವು ಮೊದಲ ರಾಮನಂಗ ಇರಾಕ ಕಲ್ತಿರಬೇಕು ಹೌದಲ್ರಿ ಹೇಳ್ರಿ' ಎನ್ನಲು ಅವಳ ಗಂಡ 'ಅಯ್ಯನೋರೆ ನಾ ರಾಮ ಅಷ್ಟಅಲ್ರಿ, ಪರಶುರಾಮ ಇದ್ದಾಂಗ ಅದೀನಿ. ನಮಗೇನ ಉಣ್ಣತಿನ್ನಾಕ ಕೊರ್ತಿ ಇಲ್ರಿ ಆದರೆ ಬಾಳ ದಿವ್ಸದಿಂದ ನಮಗ ಮಕ್ಕಳಾಗಿಲ್ಲ ಮನ್ಯಾಗ ಪೂಡು ದಗದಾ ಬಿಟ್ಟು ಅವ್ವನ ಮಾತಕೇಳಿ ಊರಾಗ ಎಲ್ಲಾ ದೇವರಿಗೆ ಹರ್ಕಿಹೊತ್ತು ಪೂಜಾ ಪುನಸ್ಕಾರ ಅಂತ ನನ್ನ ಆಸಕಾ ಬ್ಯಾಸರಾ ನೋಡುವಾರು ಮತ್ಯಾರು

CC-0. Jangamwadi Math Collection. Digitized by eGangotri

ಬ್ಯಾಂಡದ್ರು ಬಿಡವಳ್ಳು ಆದಕ್ಕ ಇವತ್ತ ಎಲ್ಲಿದ್ದರೂ ಹೊಳಿ ಕಾಣ್ಸೇ ಮತ್ತೊಳ
ಲಗ್ನಾ ಮಾಡಿಕೊಂಡ್ರು ನನ್ನ ಬಾಳು ಹಸಾ ಆಗುತ್ರೀ" ಅನ್ನುವಷ್ಟು
ಶಿವಾಚಾರ್ಯರು ಅನೇಕ ವಿಧವಾಗಿ ಇಬ್ಬರಿಗೂ ಸಂತೈಸಿದರು ಅಪರ ಮನದ
ದೊಳಿದ್ದ ಕ್ಷುಲ್ಲಕ ಕಲಹದ ಕಾರಣಗಳಿಗೆ ತಕ್ಕ ನೀತಿ
ಮಾರ್ಗವನ್ನು ತಿಳಿಸಿದರು ಯಾತೇಂಬುದನರಿಯದ ದಂಪತಿಗ
ಶ್ರೀ ಮಜ್ಜಗದ್ಗುರು ಉಜ್ಜಯನಿ ಶಾಖಾನುವರ್ತಿಗಳಾಗಿ ಸಂಚಾರಿಗ
ಬಂದ ತಪೋಸಿಧಿಗಳೆಂದು ತಿಳಿದು ದೀರ್ಘ ದಂಡ ನಮಸ್ಕರಿ
ವೀರಶೈವ ಶುದ್ಧಾಚರಣೆಯಿಂದ ಬಾಳುತ್ತೇವೆಂದು ಮಾತುಕೊಟ್ಟು
ತುಂಬುವದೊರಳಗಾಗಿ ಸಂತಾನ ಭಾಗ್ಯದ ಶುಭಾಶೀರ್ವಾದ ಪಡೆದು
ಹೋದರು ಶಿವಾಚಾರ್ಯರಿಗೆ ಸಂತಸವಾಯ್ತು ಪ್ರತಿಯೊಬ್ಬ ವ್ಯಕ್ತಿ
ಬಾಳಿನಲ್ಲೂ ಪ್ರತಿಯೊಂದು ಸಮಾಜ ಜೀವನದಲ್ಲೂ ನೋವು ನಲಿವುಗಳಿರು
ಸ್ವಾಭಾವಿಕ ನೋವನ್ನು ನುಂಗಿಸಿ ನಲಿಯುವ ನಲಿಸುವ ಸಾಹಸ
ಪುರುಷರಿಗಲ್ಲದೆ ಸಾಮಾನ್ಯರಿಗೆ ಸಾಧ್ಯವಿಲ್ಲ ಬುದ್ಧಿ ಶಕ್ತಿಗೆ ಮಿತಿಯಿಲ್ಲ ಜ್ಞಾ
ಸೀಮಿತವಿಲ್ಲ. ಆದರೂ ತರ್ಕಾತೀತ ಜ್ಞಾನಕ್ಕಿಂತ ಸ್ವಯಂ ಪ್ರಕಾಶ ಜ್ಞಾ
ಸ್ಪರ್ಶದಿಂದ ಅನೇಕ ಅಘಟಿತ ಘಟನೆಗಳು ಲೀಲಾಜಾಲವಾಗಿ ಕೊನೆಗೊಳ್ಳು
ಎನ್ನುವದಕ್ಕೆ ಸಂದೇಹವೇ ಇಲ್ಲ ಪ್ರಾಣ ಹೋಗುವ ಒಂದು ಜೀವಿಯ
ನೂರುಜನ ಕೂಡಿದರೂ ಬದುಕಿಸಲಾರು ಒಬ್ಬನು ಮನಸ್ಸು ಮಾ
ನೂರು ಜನರ ಪ್ರಾಣ ತೆಗೆಯಬಲ್ಲನಂತೆ ಇಂತಹ ಅಕಾಲ ಮರಣ
ತಪ್ಪಿಸುವದು ತಿಳಿದವರ ಪರಮ ಕರ್ತವ್ಯ ಆ ದಂಪತಿಗಳಿಗೆ ಸಂತೈ
ಅಮೃತೋಕ್ತಿಗಳಿಂದ ಸುತ್ತಣದ ಸೃಷ್ಟಿಯು ಸಂತುಷ್ಟಿಗೊಂಡಿತು ಜ
ಕೊಳೆಯನ್ನೆಲ್ಲಾ ತನ್ನ ಒಡಲಿನಲ್ಲಿ ಇಟ್ಟುಕೊಂಡು ತಪ್ತ ಹೃದಯದ ಭಾರದಿ
ಮೆಲ್ಲನಹರಿಯುತ್ತಿದ್ದ ಮಲಪ್ರಭೆಯು ಮಹಾತ್ಮರ ಪಾದ ಸ್ಪರ್ಶದಿಂದ ಪು
ಳಾಗಬೇಕೆಂದು ಕರೆದಳೋ ಅಥವಾ ಹೊಳೆಯ ನಡು ಮಧ್ಯದಲ್ಲಿ ಬಂಡೆ
ಅಂದೊಮ್ಮೆ "ಶ್ರೀ ರಾಮ ಪಾದಸ್ಪರ್ಶದಿಂದ ಶಿಲೆಯಾಗಿದ್ದ ಮುನಿಸತಿ ಅಹ
ತ್ತೆ ಮರು ಜನ್ಮ ಪಡೆದಂತೆ" ಕಾಲಕಾಲಾಂತರಕ್ಕೂ ಶಿವಲಿಂಗ ರೂಪದಿಂದ ತಪಸ್ಸಿ
ಕುರುಹಾಗಿ ಕಾಣಿಸಿಕೊಳ್ಳಲು ಕಲ್ಪಿಸಿತ್ತೊ ಅಂತೂ ಶಿವಾಚಾರ್ಯರಿಗೆ ಅ
ಷ್ಠಾನಕ್ಕೆ ಕುಳಿತು ಕೊಳ್ಳಲು ಶಿವ ಪ್ರೇರಣೆ ಯಾದಂತಾಗಿ ಶಿಷ್ಯನಿಗೆ ಜಂಗಮ
ತ್ರಿಕಾಲವೂ ಲಿಂಗ ಪೂಜಾನಿಷ್ಠನಾದ ನಾನು ಆಗೊ ಹೊಳೆಯ ನಡು ಮಧ್ಯ
ಬಂಡೆಗಲ್ಲಿನ ಮೇಲೆ ಅನುಷ್ಠಾನಕ್ಕೆ ಕುಳಿತುಕೊಂಡು ಲಿಂಗ ಪೂಜಾ ಸಮ

CC-0. Jangamwadi Math Collection. Digitized by eGangotri

ಕೂಡಾ ಆಗಿದೆ ನೀನು ಊರಲ್ಲಿ ಹೋಗಿ ಭಿಕ್ಷಾಟನೆ ಮಾಡಿಕೊಂಡು ಬಾ ನಮ್ಮ ಅನುಷ್ಠಾನ ಮುಗಿಯುವವರೆಗೂ ದಂಡೆಯ ಮೇಲೆ ಕಾಯುತ್ತಿರು ಎಂದು ಹೇಳಿದರು. ಆಗ ಶಿಷ್ಯನು ಭಯಗ್ರಸ್ತನಾಗಿ 'ಬುದ್ದಿ ಈಗ ತುಂಬಾ ಮಳೆಗಾಲದ ಸಮಯ ಮೇಲ್ಗಡೆ ಎಲ್ಲಿಯಾದರೂ ಮಳೆ ಬಿದ್ದು ಹೊಳೆ ಬಂದುಬಿಟ್ಟರೆ ತಮ್ಮ ಅನುಷ್ಠಾನಕ್ಕೆ ತೊಂದರೆಯಾದೀತು' ಎಂದು ಹೇಳಲು ಅದಕ್ಕೆ ಮಹಾಸ್ವಾಮಿಗಳು 'ಬಂಗಾರಕೊಪ್ಪುವ ಬಣ್ಣದ ಒಪ್ಪ ಹಾಕುವ ಕಲೆಗಾರ ಅಕ್ಕಸಾಲಿಗನಿಗಲ್ಲದೆ ಒಕ್ಕಲಿಗನಿಗೆಂತು ಗೊತ್ತಾಗುವದು ನಮ್ಮಿಂದ ಈ ನಾಡತಾಯಿಗೆ ಈ ಭೂಮಿಯ ಮಕ್ಕಳಿಗೆ ಯಾವ ಸೇವೆಯಾಗಬೇಕೆಂದು ಶ್ರೀ ಗುಳಕಾಡ ಸಿದ್ಧೇಶ್ವರನು ಈ ಸ್ಥಾನದಲ್ಲಿ ಅನುಷ್ಠಾನಕ್ಕೆ ಕುಳಿತುಕೊಳ್ಳಲು ನಮ್ಮ ಅಂತರಂಗದಿ ಪ್ರೇರಣೆ ಮಾಡುತ್ತಿರುವನೋ ಅವನಿಗೊಬ್ಬನಿಗೆ ಮಾತ್ರ ಗೊತ್ತು ಆತ ಸೂತ್ರಧಾರ ನಾವು ಪಾತ್ರಧಾರಿಗಳು ಅವನಾಡಿಸಿದಂತೆ ನಾವು ಜಗದ್ರಂಗಭೂಮಿಯಲ್ಲಿ ಆಡಲೆ ಬೇಕಾಗಿದೆ ನೀ ಈಗ ಭಿಕ್ಷಾಟನೆಗೆ ಹೋಗೆಂದು' ಹೇಳಿ ಬಂದು ಹೊಳೆಯ ನಡುಮಧ್ಯದ ಬಂಡೆಗಲ್ಲಿನ ಮೇಲೆ ಅನುಷ್ಠಾನಕ್ಕೆ ಕುಳಿತುಕೊಂಡರು. ಧ್ಯಾನ ಮಗ್ನರಾಗಿ ಶಿವರೂಪದಲ್ಲಿ ಯೋಗ ಸಮಾಧಿಯನ್ನು ತಾಳಿದರು, ಹೊತ್ತು ಗೊತ್ತುಗುರಿಯಿಲ್ಲದೆ ಸಾಗಿತ್ತು ಪರಮ ವೈರಾಗ್ಯ ಸಂಪಣ್ಣರಾದ ಶಿವಾಚಾರ್ಯರ ವಿದೇಹ ಸ್ಥಿತಿಯ ಅನುಷ್ಠಾನದ ಸತ್ವ ಪರೀಕ್ಷೆಗೆಂದೋ ಅಥವಾ ಗ್ರಾಮನಿವಾಸಿಗಳಿಗೆ ಇವರ ಮಹಿಮೆ ತಿಳಿಸಲೆಂದೋ ಶಿವನು ಎಲ್ಲಿಯೋ ಮೇಲ್ಗಡೆ ಮಳೆತರಿಸಿ ರಭಸದಿಂದ ಹೊಳೆಗೆ ಮಹಾಪೂರ ತಂದೊಡ್ಡಿದಾ ಅವರ ತಪಸ್ಸಿನ ಪ್ರಭಾವವೆಂತಹುದೋ ನೋಡು ನೋಡುವಷ್ಟರಲ್ಲಿ ಬಂಡೆಗಲ್ಲಿನ ಸುತ್ತಲೂ ಬೃಹದಾಕಾರವಾಗಿ ಮುಳ್ಳಿನ ಕಂಟಿಗಳು ಮುತ್ತಿದವು. ಹವನಾದ ರೇವೆ ಮಣ್ಣು ಮೆತ್ತಿ ಅವರಿಗೆ ಯಾವ ಬಾಧೆಯೂ ಆಗದಂತೆ ಸುತ್ತುಮುತ್ತಲೂ ಜಲಸ್ತಂಭನವಾಗಿ ಸ್ವಾಮಿಗಳು ಕೊಚ್ಚಿಕೊಂಡು ಹೋಗದಂತೆ ಅನುಷ್ಠಾನಕ್ಕೆ ಭದ್ರವಾದ ಬೇಸುಗೆಯನ್ನು ಹಾಕಿದಳು. ಗಂಗಾಮಾತೆ ಅಹುದು ದ್ವಾಪರಯುಗದಲ್ಲಿ ತನ್ನ ಮಗನಾದ ಭೀಷ್ಮನಿಗೆ ಗಂಗೆಯು ನೀರಲ್ಲಿ ಅದಾವಕುತ್ತೂ ಬಾರದಿರಲೆಂದು ಜಲಸ್ತಂಭರತ್ನವನ್ನು ಕಟ್ಟಿದ್ದಳಂತೆ. ಅದರಂತೆ ಕಲಿಯುಗದ ಈ ವೀರ ಸಂಪನ್ನರಿಗೆ ವಿರಕ್ತ ಶರಣರಿಗೆ ಲಿಂಗಾನಿಷ್ಟ ಅನುಷ್ಠಾನ ಭೀಷ್ಮ ತಪಸ್ವಿಗಳಾದ ಶಿವಾಚಾರ್ಯರಿಗೆ ಕೃಪೆ ತೋರಿದಳು. ಹೊಳೆಯು ಎರಡೂ ದಂಡೆಗುಂಟ ಹರಿಯುತ್ತ ನೀರು ಹೆಚ್ಚಾಗಿ ಕ್ರಮೇಣ ಶಿವಾಚಾರ್ಯರು ಕಾಣದಂತಾದರು. ಭಿಕ್ಷಾಟನೆಗೆ ಹೋದ ಜಂಗಮಯ್ಯನು ಬಂದು ನೋಡುತ್ತಾನೆ

CC-0. Jangamwadi Math Collection. Digitized by eGangotri

ನೀರು ಭೋರ್ಗರೆದು ಹರಿಯುತ್ತಿದೆ. ಸ್ವಾಮಿಗಳು ಎಲ್ಲಿಯೂ ಕಾಣಸ
ಕಂಗಾಲಾಗಿ ಗುರುಗಳೆ ಗುರುಗಳೆ ಎಂದು ಕಣ್ಣೀರಿಟ್ಟು ಕೊಗುತ್ತಾ
ಹಂಬಲಿಸಿ ತುಂಬುಹೃದಯದಿಂದ ರೋಧಿಸುತ್ತಾನೆ. ಆದರೆ ಮಾಡುವದು
ಗುರುವಚನವೆ ಶ್ರುತಿ ಗುರುವಚನವೇ ಸ್ಮೃತಿ ಅನುಷ್ಠಾನ ಮುಗಿಯುವವ
ದಂಡೆಯ ಮೇಲೆ ಕಾಯುತ್ತಿರು ಎಂಬು ಹೇಳಿದ ಅವರ ಮಾತನ್ನು ಪಾಲಿಸ
ಧೀರ ಪ್ರತಿಜ್ಞೆ ಮಾಡಿ ಅವರ ದರ್ಶನವಾಗದೆ ಈ ಸ್ಥಳ ಬಿಡುವದಿಲ್ಲವೆಂ
ಅಲ್ಲಿಯೇ ನಿಂತುಬಿಟ್ಟನು, ತಾಸಲ್ಲ ಎರಡು ತಾಸಲ್ಲ ಒಂದುದಿನ ಪೂರ್ತಿಯಾದ
ಹೊಳೆ ಇಳಿಯಲಿಲ್ಲ ಊರತ್ಲೆಲ್ಲಾ ಮಹಾಸ್ವಾಮಿಗಳು ಮುಳುಗಿಹೋದರೆಂ
ಪ್ರಚಾರವಾಯ್ತು, ನೂರಾರು ಸಾವಿರಾರು ಜನರು ಬಂದು ನೋಡಿ ನೊ
ನಿರಾಶರಾಗುತ್ತ ಹೋದರು. ಹೀಗೆ ಎರಡು ದಿನ ಕಳೆಯಿತು. ಪೂರ್ಣಯೋ
ಪರಂಧಾಮದಲ್ಲಿ ಶಿವಯೋಗಿಗಳ ಲಿಂಗಾನುಸಂಧಾನವು ನಡದೇ ಇ
ಲೌಕಿಕ ಜಗತ್ತಿನ ಕಣ್ಣಿಗೆ ಮಾತ್ರ ಕಂಡಿರಲಿಲ್ಲ. ಮನಸ್ಸನ್ನು ಗೆದ್ದವ
ಮಹಾತ್ಮರೆಂದು ನಿಸ್ಸಂದೇಹವಾಗಿ ಹೇಳಬಹುದು. ಅಂಥ ಪವಿತ್ರಾ
ಆತ್ಮವನ್ನು ಬೆಂಕಿಯು ಸುಡದು ನೀರು ನೆನಿಸದು ಗಾಳಿ ಒಣಗಿಸ
ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ । ನ ಚೈನಂ ಕ್ಲೇದ
ತ್ಯಾಪೋ ನ ಶೋಷಯತಿ ಮಾರುತಃ ॥ ಅಂತಾ ಭಗವದ್ಗೀತೆಯ (ಅಧ್ಯಾ
೨ ೮) ಪ್ರಮಾಣದಂತಿರುತ್ತದೆ. ದಟ್ಟಪಾದ ಒಕ್ಕೊರಲಿನ ಈ ಸಮಾ
ಚಿತ್‌ಶಕ್ತಿಯಾಗಿ ನಾಡನಾಳುವ ಅಧಿಕಾರಿ ರಕ್ಕಸಗಿ ಗ್ರಾಮದ (ಅಮರಾವತಿ
ರಾಮರಡ್ಡಿ ದೇಸಾಯರ ಅಂದಿನ ಬೆಳಗಿನ ಸ್ವಪ್ನದಲ್ಲಿ ಕಾಣಿಸಿಕೊಂಡ
ಸ್ವಪ್ನದಲ್ಲಿ ಶಿವಾಚಾರ್ಯರರ ದರ್ಶನವಾಯ್ತು. ಶರಣ ಸಂತೃಪ್ತರ
ದೇಸಾಯರಿಗೆ ಪಂಚಪ್ರಾಣ. ಸೂಕ್ಷ್ಮ ಶರೀರದಿಂದಲೇ ದಿವ್ಯ ಚೇತ
ಪ್ರಭಾಮಯ ಸ್ವಾಮಿಗಳೊಂದಿಗೆ ಕುಶಲ ಸಂಭಾಷಣೆ ನಡೆಸುತ್ತ ಯ
ಕ್ಷೇಮಕ್ಕಾಗಿ ವಿಚಾರಿಸಿದರು. ಆಗ ಬುದ್ಧಿಯವರು " ದೇಸಾಯರೆ ! ನ
ಕಡಪಾ ಜಿಲ್ಲೆಯ ದಂಡಗುಂಡಿ ಗ್ರಾಮದ ಹಿರೇಮಠದವರು ಶ್ರೀ ಸಿದ್ಧೇ
ಶಿವಾಚಾರ್ಯ ಮಹಾಸ್ವಾಮಿಗಳುದಾರುಕ ಶಾಖಾನುವರ್ತಿಗಳಾದ ಸ
ಸಂಚಾರ ಮಾಡುತ್ತ ಕೂಡಲ ಸಂಗಮೇಶನ ದರ್ಶನ ಮಾಡಿಕೊ
ಹಡಗಲಿಯ ಮುಂದಿನ ಮಲಪ್ರಭೆ ಹೊಳೆಯಲ್ಲಿ ಅನುಷ್ಠಾನಕ್ಕೆಕುಳಿತ
ಮೂರು ದಿನಗಳಾದವು ಅದೇಕೋ ಗಂಗಾ ಮಾತೆ ಮುನಿದು ತು
ಪ್ರವಾಹದಿಂದ ಹರಿಯುತ್ತಲಿದ್ದಾಳೆ. ನೀವು ಬಂದರೆ ನೀರು ಇಳಿಯು

CC-0. Jangamwadi Math Collection. Digitized by eGangotri

ನಡು ಹೊಳೆಯ ಬಂಡೆಗಲ್ಲು ನಾವು ಕುಳಿತ ಸ್ಥಾನ. ಅದು ಸಂಪೂರ್ಣ ಮಣ್ಣಿನ ರೇವೆ ಮುಳ್ಳು ಕಂಟಿಗಳಿಂದ ಮುಚ್ಚಿಬಿಟ್ಟಿದೆ ಅದನ್ನು ಕಡೆಗೆ ಮಾಡಿದರೆ ಅಲ್ಲಿಯೇ ಇರುತ್ತೇನೆ. ಬರುತ್ತೀರಾ" ಎಂದು ಕೇಳಲು ದೇಸಾಯರು "ಅಯ್ಯೋ ಬುದ್ದಿ; ನಮ್ಮ ನೆಲವಲ್ಲಿ ಕಾಲಿಟ್ಟು ಮೂರು ದಿನವಾಯ್ತು ತಮ್ಮಂಥ ಮಹಾತ್ಮರನ್ನು ಗೌರವದಿಂದ ಸ್ವಾಗತಿಸಿ ಯೋಗ್ಯ ಸನ್ಮಾನಗಳ ಒಂದಿಗೆ ಪವಿತ್ರ ಸ್ಥಾನದ ಏರ್ಪಾಡು ಮಾಡದೆಬಿಟ್ಟೆನಲ್ಲಾ ನನ್ನ ಅಧಿಕಾರಲಾಲಸೆಯ ಮರವೆಯನ್ನು ಕ್ಷಮಿಸಿರಿ ಬುದ್ದಿ ನಾನೀಗಲೇ ತಮ್ಮ ದರ್ಶನಕ್ಕೆ ಬರುತ್ತೇನೆ." ಎಂದವರೇ ಥಟ್ಟನೇ ಎದ್ದರು ಸುತ್ತಲೂ ಕಣ್ಣರಳಿಸಿ ನೋಡುತ್ತಾರೆ. ತಮ್ಮ ಬಾಳಲ್ಲಿ ಬೆಳಕಾಗುವದೇನೋ ಎಂಬಂತೆ ಸೂರ್ಯೋದಯದ ಬೆಳಕು ಮೂಡಿದೆ, ತಿಳಿ ಗಾಳಿ ಬೀಸುತಿದೆ, ಕತ್ತಲೆಯು ಓಡುತ್ತಸುತ್ತುಮುತ್ತೆಲ್ಲ ಹಕ್ಕಿಗಳು ಹಾಡುತ್ತ ಜಗಕೆ ಚೇತನವ ತುಂಬುವ ಭಾಸ್ಕರನ ಆಗಮನಕ್ಕೆ ಸ್ವಾಗತಿಸುತಿವೆ. ಸ್ವಪ್ನದಲ್ಲಿ ದೇಸಾಯರು ಕಂಡ ಶಿವಾಚಾರ್ಯರ ದರ್ಶನಕ್ಕೆ ಅವರ ಮನಸ್ಸು ಹಾತೊರೆಯ ಹತ್ತಿತು ಗಾಳಿ ಬೀಸಿದಾಗ ತೂರಬೇಕಂತೆ ಶಿವಶರಣರೆಂಬ ಗಾಳಿ ಬೀಸುವಾಗ ತನ್ನ ಜನ್ಮ ಪಾವನ ಮಾಡಿಕೊಳ್ಳಬೇಕು ಜನ್ಮಭೂಮಿಯನ್ನು ಪಾವನಗೊಳಿಸಬೇಕೆಂಬ ಹಂಬಲದಿಂದ ಕಾರಭಾರಿಗಳನ್ನು ತಡ ಮಾಡದೇ ಕೂಗಿದರು. ಕನಸಿನ ವೃತ್ತಾಂತ ವನ್ನು ತಪ್ಪದೇ ಹೇಳಿದರು ಅದಕ್ಕೆ ಕಾರಭಾರಿಗಳು-

"ದೇಸಾಯರೇ ನಿಮಗೆಲ್ಲೋ ಹುಚ್ಚು ಜಗದ್ಗುರುಗಳೆಂದರೇನು ವಿರಕ್ತರಾದರೇನು? ಹೊಳೆಯಲ್ಲಿ ಅನುಷ್ಠಾನಕ್ಕೆ ಕುಳಿತು ಹೊಳೆಯು ಬಂದು ಮುಳಗಿ ನಿಮ್ಮ ಸ್ವಪ್ನದಲ್ಲಿ ಬಂದು ಹೇಳುವದೆಂದರೇನು? ನೀವೀಗ ಹೋಗಿ ನೋಡಿದರ ಸಿಗತ್ತಾರೇನ್ರಿ? ಭೋರಿಡುವ ಹೊಳೆ ಸ್ವಾಮಿಗಳನ್ನು ಕೊಚ್ಚಿಕೊಂಡು ಹೋಗದೆ ಹಾಗೆ ಬಿಡುತ್ತದೆ ಏನ್ರಿ ಅದೂ ಹೋಗಲಿ ಜೀವಂತ ಇರುದರ ಹ್ಯಾಗ್ರೀ" ಹೀಗೆ ತನ್ನ ಅಲ್ಪ ಬುದ್ಧಿಗನುಸಾರವಾಗಿ ನಿರಾಕರಿಸುತ್ತಿರುವಾಗ ದೇಸಾಯರು "ಕಾರಭಾರಿಗಳೇ ನೀವು ಏನೇ ಹೇಳಿದರು ನನ್ನಾತ್ಮವಿಶ್ವಾಸವು ಮಾತ್ರ ಅವರು ಸಜೀವವಾಗಿದ್ದಾರೆಂದು ಸ್ಪಷ್ಟವಾಗಿ ಹೇಳುತ್ತದೆ ಅವರು ಸಾಮಾನ್ಯರಲ್ಲ ಮಹಾ ತಪಸ್ವಿಗಳು ತಮ್ಮ ಕುರುಹನ್ನೆಲ್ಲಾ ಅರುಹಿ ನಮ್ಮ ಬರುವನ್ನು ಕಾಯುತ್ತಿರುವಂತೆ ನನಗನಿಸಹತ್ತಿದೆ. ಬೆಳಗಿನ ಸ್ವಪ್ನವೆಂದಿಗೂ ಹುಸಿಯಾಗದು ನಡೆಯಿರಿ ನನ್ನ ಮಾತಿಗೆ ಯಾವ ಪ್ರತಿಮಾತನ್ನು ಹೇಳದೆ ಸಕಲ ಪೂಜಾಸಾಮಾಗ್ರಿಗಳೊಂದಿಗೆ ವೈಭವಪೂರಿತ ಸನ್ಮಾನದೊಂದಿಗೆ ನಾವಿಗಲೇ

CC-0. Jangamwadi Math Collection. Digitized by eGangotri

ಹೊರಡಬೇಕು" ಎಂದು ಕಟ್ಟಪ್ಪಣೆ ಮಾಡಿದರು ದೈವಿ ಕೃಪೆಯನ್ನಳೆಯ
ಅಥವಾ ಬೆಲೆ ಕಟ್ಟಲು ಸಾಮಾನ್ಯ ಜನರಿಂದ ಸಾಧ್ಯವೆ? ತರ್ಕಶಕ್ತಿಯು
ವಿಜ್ಞಾನವು ಭರದಿಂದ ಇಂದು ಮುಂದುವರೆದಿದ್ದ
ಅಂದು ಆಚರಿಸಿ ಅನುಸರಿಸಿ ಅನುಗ್ರಹಿಸಿದಾ ನಮ್ಮ ಶಿವ ಶರಣ
ತತ್ವಾನುಸಂಧಾನ ಷಟ್‌ಸ್ಥಲದ ಆಚರಣೆ ಅಷ್ಟಾವರ್ಣಗಳಂಥ ಮಹತ್ವ
ವಿಚಾರಗಳಿಗೆ ಮೂಕವಾಗಿ ಇಂದು ಮನಸೋತಿದೆ ಕುಲಜಾತಿಗಳ ಭೇಧವಿ
ಸಮಾನತೆಯ ತಳಹದಿಯ ಮೇಲೆ ವಿಶ್ವಮಾನ್ಯತೆ ಹೊಂದಿದ ವೀರಶೈವ ಧರ್ಮ
ತಿರುಳನ್ನು ಇಂದು ಕಣ್ಣರಳಿಸಿ ನೋಡುವಂತಾಗಿದೆ ಮಾನವನ ಅಂತರಂ
ಸಮಸ್ತ ಚೇತನಗಳ ಬುನಾದಿ ಉಪಮಾತೀತನಾದ ಆತ್ಮನು ಪಥಿಕನಾಗಿ ಜೀವ
ರಥಿಕನಾಗಿ ಮನವೆಂಬ ಸಾರಥಿಯೊಂದಿಗೆ ಹುಟ್ಟು ಸಾವುಗಳೆಂಬ ಕೋಟೆ
ಸುತ್ತ ವ್ಯರ್ಥವಾಗಿ ಸುತ್ತಿ ಸುತ್ತಿ ಸೋಲುತ್ತ ನಡೆದಿರುವಾಗ ನಿಜದ ನಿ
ಕಾಣಲು ಪೂರ್ವಾರ್ಜಿತ ಪುಣ್ಯವು ಬೇಕು ನಡೆ ನುಡಿಗಳಲ್ಲಿ ಭಗವತ್ ಚಿಂತ
ಯುಳ್ಳವರಾಗಿ ನಿಷ್ಕಾಮ ರೀತಿಯಿಂದ ಬದುಕನ್ನು ಸಾಗಿಸುತ್ತಿರಬೇಕು ಸಂ
ಬಂದಾಗ ಆಶೆ ಆಮಿಷಗಳು ಬಾಧಿಸಿದಾಗ ಮಾತ್ರ ಈಶ್ವರೋಪಾಸಕರಾ
ಬದುಕು ಪಾವನವಾಗದು ಗುರುಕೃಪೆ ದೊರಕದು ಜ್ಞಾನಯೋಗಿ
ದರ್ಶನವು ಲಭಿಸದು.

ರಕ್ಕಸಗಿಯ ದೇಸಾಯರು ಶ್ರೀಗಳನ್ನು ಕಾಣುವ ಕ
ರತೆಯಿಂದ ತಮ್ಮ ಕಾರಭಾರಿಗಳೊಂದಿಗೆ ನಡೆದು ಬಂದರು ಆಶ್ಚರ್ಯ
ಪರಮಾಶ್ಚರ್ಯ !! ಶಿವಾಚಾರ್ಯ ಶ್ರೀಗಳ ತಪಃಪ್ರಭಾವವು ಎಂತಹುದು
ಕಠಿಣ ತರ ಉಗ್ರಅನುಷ್ಠಾನ ನಿಷ್ಠೆಯೆಂತಹುದೋ! ಪ್ರಾಣದಲ್ಲಿ ಅವರ ನಿ
ಯತೆಯ ಆತ್ಮವಿಶ್ವಾಸದ ಪ್ರತಿ ಫಲಕ್ಕೆ, ಪ್ರಕೃತಿಯೇ ಗುರು, ಗಗನ
ಲಿಂಗವಾಗಿ ಸುತ್ತ ಮುತ್ತಲಿನ ಹುಲ್ಲೆ ಪ್ರತಿಯಾಗಿ ಆಗಾಗ ಭೂದೇವಿಯಿಂದ
ಹುಡಿಯೇ ಭಸ್ಮವಾಗಿ ಜಡಕ್ಕಿಲ್ಲ ಜಂಗಮತ್ವ ಕರುಣಿಸಿದ್ದ ದಿವ್ಯ ನಿಸರ್ಗ
ಸ್ಥಳದಲ್ಲಿ ಮೌನ ಪೂಜೆ ನಡೆದಿದೆ ಎಂಬಂತೆ ಅನಿರ್ವಚನೀಯ ಬ್ರಹ್ಮಾನುಭವ
ಸೃಷ್ಟಿಮಾತೆ ಅನುಭವಿಸುತ್ತಿರುವಂತೆ ಕಾಣುತಿತ್ತು. ದೇಸಾಯರುಗಳು ಸಮೀ
ಬಂದು ನೋಡುತ್ತಾರೆ ಗಂಭಿರತೆಯ ಪ್ರಶಾಂತ ವಾತಾವರಣ ಕ
ಕ್ಷಣ ಹೊತ್ತು ವಿಸ್ಮಿತರಾದರು ನಂತರ ಮೂರು ದಿನಗಳಿಂದ ಹಸಿವೆ
ಗಳ ಕಟ್ಟಿ ಕೃಶವಾಗಿ ಗುರುಗಳ ಮಲಗಿದ್ದ ಸ್ಥಾನವನ್ನೇ ನೋಡುತ್ತ ಪ್ರಜ್ಞಾ
ಹೀನ ಸ್ಥಿತಿಯಲ್ಲಿದ್ದ ಜಂಗಮಮೂರ್ತಿಗಳನ್ನು ಸಾವಧಾನದಿಂದ ವಿಚಾರಿಸಿದ

CC-0. Jangamwadi Math Collection. Digitized by eGangotri

ತಮ್ಮ ಹೃದಯದ ಕಟ್ಟೆಯೊಡೆದಾ ಕಣ್ಣೀರು ಸುರಿಸುತ್ತ ಜಂಗಮಯ್ಯನವರು ಶ್ರೀಗಳು ಕುಳಿತ ದಿಕ್ಕಿನಡೆ ಕೈಮಾಡಿ ತೋರಿಸುತ್ತ ಹೇಳಿದರು ಮೂರು ದಿನಗಳಿಂದಲೂ ಗುರುವಿನ ನಿರೀಕ್ಷಣೆಯಲ್ಲಿ ದೇಹಾಭಿಮಾನವ ತೊರೆದುನಿಂತು ಹಸಿವು ನಿದ್ದೆಗಳನು ಮೈಮರೆತ ಶಿಷ್ಯನ ಅಚಲ ಸೇವಾನಿಷ್ಟೆಗೆ ದೇಸಾಯರು ಬೆರಗಾದರು ಇಂತಪ್ಪ ಗುರುಶಿಷ್ಯರ ಸಮಾಗಮದ ದಿವ್ಯನಿರೀಕ್ಷೆಯಲ್ಲಿರುವ ತನ್ನನಾಡಿನ ಸುಕೃತಕ್ಕೆ ಹರ್ಷ ತಾಳಿದರು.

ದೇಸಾಯರು ಗಂಗೆಯ ಸಮೀಪಕ್ಕೆ ಬಂದು "ಅಮ್ಮಾ ಲೋಕದ ಹಿತಚಿಂತನೆಗಾಗಿ ಸಕಲ ಜೀವಾತ್ಮರ ಪಾಪಗಳ ಕ್ಷಾಲನ ಮಾಡಿ ನಿಜದ ನಗಾರಿ ಬಾರಿಸುವ ಶರಣ ಸತ್ಪುರುಷರ ತಪೋನಿಧಿಗಳ ದರ್ಶನ ನನಗೆ ಮಾಡಿಸಲಾರೆಯಾ ಈ ನಾಡಿನ ಅಧ್ಯಾತ್ಮ ಶ್ರೀಗೆಂದಿಗೂ ಚ್ಯುತಿ ಇಲ್ಲ ಮೆಂಬಲ್ಲಿ ನೀನೀಗಲೇ ಪ್ರಶಾಂತಳಾಗು ಕನ್ನಡಿಗರ ಆತ್ಮ ತೇಜವೆಂದು ಅವಿನಾಶಿ ಎಂಬುದೇ ದಿಟವಿದ್ದಲ್ಲಿ ನೀನೀಗಲೇ ಇಳಿದುಬಿಡು, ಆ ಪೂಜ್ಯರ ದಾಸಾನುದಾಸನಾಗಲು ಅನೇಕ ಸಂಕಲ್ಪಗಳನ್ನು ಮನದಲ್ಲಿ ಮಾಡಿಕೊಂಡು ಇಗೋ ನಿನ್ನ ಪವಿತ್ರ ನೀರಿನಿಂದ ಸಂಕಲ್ಪ ಬಿಡುತ್ತೇನೆಂದು" ಗಂಗಾ ಮಾತೆಗೆ ನಮಸ್ಕರಿಸಿ ನೀರು ಬಿಟ್ಟು ಕ್ಷಣ ಹೊತ್ತು ಕಣ್ಮುಚ್ಚಿ ಧ್ಯಾನ ಮಾಡಿ ಶ್ರೀಗಳ ಹೆಸರಿನಿಂದ ಜಯಘೋಷ ಮಾಡಿದರು. ನಿಸರ್ಗದ ದಶ ದಿಶೆಗಳಲ್ಲಿ ನದಿಯ ಸದ್ದು ಕೇಳದಂತೆ ಪ್ರತಿಧ್ವನಿಗೊಂಡಿತು ದೇಸಾಯರ ಕರಸ್ಪರ್ಶದಿಂದ ಇದೇನು ಅದ್ಭುತವು ಎಂಬಂತೆ ಗಂಗೆಯು ನೋಡು ನೋಡುವಷ್ಟರಲ್ಲಿ ನೀರಿನ ಪೆರ್ದೆರೆಗಳನ್ನು ಕರಗಿಸುತ್ತ ಪ್ರಶಾಂತವಾಗಿ ಇಳಿಯ ಹತ್ತಿದಳು. ದೇಸಾಯರು ಆನಂದದಿಂದ ಕೂಡಿದ ಜನರೊಡನೆ ಜಯಕಾರಗಳನ್ನು ಮಾಡುತ್ತ ಭಕ್ತಿಯ ಆವೇಶದಲ್ಲಿ ತಾಸೆರಡು ತಾಸು ಕಳೆಯುವಷ್ಟರಲ್ಲಿ ಮತ್ತಿಷ್ಟು ನೀರು ಸರಿಯಿತು ಕೂಡಿದ ಭಕ್ತ ಸಮೂಹಕ್ಕೆ ಎಲ್ಲಿಲ್ಲದ ಉತ್ಸಾಹ ಮುಂದೆ ಕೆಲ ಹೊತ್ತಿನಲ್ಲಿ ಮುಳ್ಳುಕಂಟಿಗಳಿಂದ ಮುಚ್ಚಿದ ಅದ್ಭುತವಾದ ಬಂಡೆಗಲ್ಲು ಕಾಣಹತ್ತಿತು ದೇಸಾಯರು ಬೆದರದೇ ಬೆಚ್ಚದೇ ಜನರೊಂದಿಗೆ ನದಿಯಲ್ಲಿ ನಡೆಯುತ್ತಾ ಅದರ ಹತ್ತಿರ ಬಂದರು. ಸ್ವಾಮಿಗಳಿಂದ ಅನುಷ್ಠಾನದ ಮಂತ್ರೋಚ್ಚಾರ ಮೆಲ್ಲನೆ ಕೇಳಹತ್ತಿತು. ಶ್ರೀಗಳು ಜೀವಂತವಿದ್ದಾರೆಂದು ಜನರಿಗೆ ಮತ್ತಷ್ಟು ಸಂತಸ. ಊಹಾತೀತವಾದ ಅವರ ಪವಾಡ ಸಿದ್ಧಿಗೆ ಜನರು ದರ್ಶನಕ್ಕಾಗಿ ನಾಮೊದಲು ತಾಮೊದಲು ಎನ್ನುತ್ತ "ಶ್ರೀ ಕಾಡಸಿದ್ಧೇಶ್ವರ ಮಹಾರಾಜಕೀ ಜೈ" "ಶಿವಾಚಾರ್ಯ ಶ್ರೀಗಳಿಗೆ ಜಯವಾಗಲಿ"

CC-0. Jangamwadi Math Collection. Digitized by eGangotri

ನಾನಾ ಪ್ರಕಾರವಾಗಿ ಭಕ್ತರು "ಉಘೇ ಉಘೇ" ಎನ್ನಲು ವಿದೇಹ ಸ್ಥಿ
ಯಲ್ಲಿದ್ದ ಶ್ರೀಗಳ ಆತ್ಮ ಜ್ಯೋತಿಯು ಅವರ ಶರೀರದಲ್ಲಿ ಲೀನವಾ
ಧ್ಯಾನ ಸಮಾಧಿಯಿಂದ ಜಾಗೃತಗೊಳಿಸಿತು, ಅಂತರಂಗದ ಶಿವಪೂಜ
ಏಕಾಂತ ಭಾವ ಬಯಲಾಯ್ತು. ಅಷ್ಟು ಹೊತ್ತಿನೊಳಗಾಗಿ ಜನರು ಮು
ಕಂಟಿ ರೇವೆ ಮಣ್ಣನ್ನೆಲ್ಲ ಕಿತ್ತಿ ಬಯಲು ಮಾಡಿದ್ದರು. ಭಕ್ತರೆಲ್ಲರ ಜ
ಘೋಷಕ್ಕೆ ಶ್ರೀಗಳವರು ಕಣ್ತೆರೆದರು. ತಮ್ಮ ಶಿಷ್ಯನನ್ನು ಕಂಡು "ಜಂಗಮಯ
ನಾವು ಇದು ವರೆಗೆ ಅದಾವುದೋ ಅವ್ಯಕ್ತ ಲೋಕದಲ್ಲಿ ವಿಹಾರ ಮಾಡ
ತ್ತಿದ್ದೆವು. ಆದರಿದೇನು ಅದ್ಭುತ ಇಷ್ಟೆಲ್ಲಾ ಜನರು ಏಕೆ ಸೇರಿದ್ದಾರೆ ನ
ಅನುಷ್ಠಾನವು ಭಂಗವಾಗದೆ ಲಿಂಗ ತೃಪ್ತಿಯಾಗಿ ನೆರವೇರಿದೆಯೇ ? "
ಸವಿನಯವಾಗಿ ಹೇಳುತ್ತಿರುವಷ್ಟರಲ್ಲಿ ಶಿಷ್ಯನು ನಡೆದ ವೃತ್ತಾಂತವನ್ನ
ಹೇಳಿದನು. ದೇಸಾಯರ ಪರಿಚಯುವನ್ನು ಮಾಡಿಕೊಟ್ಟನು ದೇಸಾಯ
ಕೂಡಾ ಪ್ರಾಯಶ್ಚಿತ್ತದಿಂದ "ಬುದ್ದೀ ತಾವು ನಮ್ಮ ನಾಡಿನಲ್ಲಿ ಬರುವ
ಗೊತ್ತಾಗಲಿಲ್ಲ ತಾವು ಮೊದಲೇ ಹೇಳಿಕಳುಹಿಸಿದ್ದರೆ ತಮಗೆ ತಕ್ಕ ಮರ್ಯಾ
ಯೊಂದಿಗೆ ಎದುರುಗೊಂಡು ಬರಮಾಡಿಕೊಳ್ಳುತ್ತಿದ್ದೆವು ತಮ್ಮ ನಿತ್ಯ ಅ
ಷ್ಠಾನಕ್ಕೆ ತಕ್ಕ ಏರ್ಪಾಡು ಮಾಡುತ್ತಿದ್ದೆವು" ಎಂದು ಹೇಳುವಷ್ಟರಲ್ಲಿ ಶ್ರೀಗ
"ನೋಡಿ ದೇಸಾಯರೆ; ಮಾಲೆಗಾರನ ಮಾತನ್ನು ಕೇಳಿ ಹೂವು ಅರಳುವ
ಜಗತ್ತಿಗೆ ಕತ್ತಲೆ ಮುಸುಗಿದೆ ಯೆಂದು ರವಿ ಮೂಡುವನೆ ಜನರು ಬಾಯ
ರಿದ್ದಾರೆಂದು ಮೇಘ ಮಳೆ ಕೊಡುವದೆ ಹಸಿದಿರುವರೆಂದು ಭೂದೇವಿ ಫ
ಕೊಡುವಳೆ ? ಇಲ್ಲ ಇಲ್ಲಾ ದೇಸಾಯರೆ ! ಶರಣರು ಲಿಂಗದ ನಡೆಯ
ನಡೆಯುವರು ಲಿಂಗ ನುಡಿದಂತೆ ನುಡಿವರು ಲಿಂಗ ಸುಳಿದಂತೆ ಸುಳಿವ
ಏಕೆಂದರೆ ''ಲಿಂಗ ಮಧ್ಯದಿ ಜಗವು ಜಗವೆಲ್ಲ ಲಿಂಗಮಯವು'' ಎಂಬ ವ
ವಾಕ್ಯವನ್ನೆಂದಿಗೂ ತಿರಸ್ಕರಿಸಲಾರರು. ಎಂದು ಹೇಳುವಷ್ಟರಲ್ಲಿ ದೇಸಾಯ
''ಆಗಲಿ ಬುದ್ಧಿ ! ತಾವೀಗ ಮೂರು ದಿನಗಳಿಂದ ಹೊಟ್ಟೆಗೆ ಪ್ರಸಾದವಿಲ್ಲ
ಬಳಲಿದ್ದೀರಿ ಹಡಗಲಿಯ ಗ್ರಾಮಕ್ಕೆ ತಾವೀಗಲೇ ದಯಮಾಡಿಸಬೇ
ತಮಗೇನು ಬೇಕು ಹೇಳಿ ತಕ್ಕ ಏರ್ಪಾಡು ಮಾಡುತ್ತೇನೆ '' ಅಂತಾ ಹೇಳಿ
ಅದಕ್ಕೆ ಶ್ರೀಗಳು ನಕ್ಕು ''ನಾಡನಾಳುವ ಅಧಿಕಾರಿಗಳೆ ! ನಮಗೇನು ಬೇ
ಇದು ಬೇಕು ಅದು ಬೇಕೆಂದು ಇಂದಿಗೆ ಬೇಕು ನಾಳಿಗೆ ಬೇಕೆಂದು ಆಶೆಯು
ರಾಗಿ ಒಬ್ಬರ ಅಧೀನದಲ್ಲಿರುವವರು ಶರಣರಲ್ಲ. ಆಶೆಯೋ ದಾಸತ್ವ, ನಿ
ಯೇ ಈಶತ್ವ. ವಿರಕ್ತರಾದ ನಮಗೆ ಸಂಕಲ್ಪ ವಿಕಲ್ಪಗಳ ಬಾಧೆಯಿಲ್ಲ ಸ

CC-0. Jangamwadi Math Collection. Digitized by eGangotri

ನಿರಾಭಾರಿಗಳಾಗಿ ಲಿಂಗಾಂಗ ಸಾಮರಸ್ಯದ ಸುಧೆಯಿಂದ ನಿತ್ಯ ತೃಪ್ತಿಯಲ್ಲಿ ರುವ ನಮಗೆ ಬೇಕು ಬೇಡಾ ಯಾವುದರ ಕಲ್ಪನೆಯೂ ಇಲ್ಲ'' ಎಂದು ಹೇಳುವಷ್ಟರಲ್ಲಿ ದೇಸಾಯರು

'ಬುದ್ದೀ ನನ್ನ ಬಹುಜನ್ಮದ ಫಲದಿಂದ ದರ್ಶನ ಕೊಟ್ಟಿದ್ದೀರಿ. ಕಲ್ಲು ಕಟ್ಟಿಗೆಗಳಿಂದ ಮಾಡಿದ ಕಿರುಕಳ ನೂರಾರು ದೇವರಿಗೆ ಕೈಮುಗಿಯುತ್ತ ನಿಮ್ಮಂಥ ಜೀವಂತ ದೇವರ ಕೃಪೆ ಕಳೆದುಕೊಂಡು ಮಾನವ ಸಮಾಜ ಅಧೋಗತಿ ಹೊಂದುತ್ತ ನಡೆದಿದೆ ಅದರಲ್ಲೂ ನಮ್ಮ ವೀರಶೈವ ಸಮಾಜವಂತೂ ತೀರಾ ಅವನತಿ ಹೊಂದಿದೆ. ಇದು ಸಂಕ್ರಾಂತಿಯ ಕಾಲ ತಾರ್ಕಿಕರನ್ನಾಶ್ರಯಿಸಿದ ಈ ದೇವರುಗಳಿಂದ ಪ್ರಸಂಗ ಬಿದ್ದರೆ ಮಾರಾಟವಾಗುವ ದೇವರಿಂದ ಜಗತ್ತು ಸಮಾಜ ಉದ್ಧಾರವಾಗುವ ಬಗೆಯಾದರೂ ಹೇಗೆ ಅದಕ್ಕಾಗಿ ನಿಮ್ಮಂಥ ಸಿದ್ಧಿ ಪುರುಷರ ಪಾದ ಧೂಳಿಯಿಂದ ಕಂಗೆಟ್ಟ ಈ ನಾಡು ಸಮಾಜ ಉದ್ಧಾರವಾಗ ಲೆಂದು ಸಂಕಲ್ಪಿಸಿ ನಿಮಗೆ ಎಲ್ಲ ಬಗೆಯ ಅನುಕೂಲ ಮಾಡಿಕೊಡುವ ಭಾರ ತಲೆಯ ಮೇಲೆ ಹೊತ್ತು ಗಂಗಾಮಾತೆಗೆ ವಚನಕೊಟ್ಟು ಸಂಕಲ್ಪ ನೀರು ಬಿಟ್ಟಾಗ ಮಲಪ್ರಭೆಯು ಇಳಿದಳು. ಅದರಂತೆ ತಾವೀಗ ಹಡಗಲಿ ಗ್ರಾಮಕ್ಕೆ ದಯಮಾಡಿಸಬೇಕೆಂದು' ವಿನಯಪೂರ್ವಕ ನಮಸ್ಕಾರವನ್ನರ್ಪಿಸಿದರು. ಹೃದಯ ದಲ್ಲಿ ಭಕ್ತಿ ನಿಷ್ಠೆ ಶ್ರದ್ಧೆಗಳು ಪುಟಿದೆದ್ದು ಬರುವಾಗ ಶುಭವಾರ ಶುಭತಿಥಿ ಶುಭನಕ್ಷತ್ರಗಳೆಂದು ಕೂಡದೆ ಮನ ಒಲಿದು ಬಂದಾಗ ತನ್ನ ತಾನೇ ನಿಜವರಿತು ನಿರಹಂಕಾರಿಯಾಗಿ ದೈವಿಕೃಪೆಗಾಗಿ ಮೊರೆಯಿಡುವದೇ ನಿಜವಾದ ಭಕ್ತಿಯಮಾರ್ಗ ಕೇವಲ ಡಂಭಾಚಾರಕ್ಕಾಗಿ ಮೂಲತತ್ವವನ್ನು ತಿಳಿಯದೆ ತೋರಿಕೆಗಾಗಿ ಮಾಡುವ ಯಾವ ಆಚರಣೆಗಳಿಂದಲೂ ಪ್ರಯೋಜನವಾಗದು. ಶ್ರೀಗಳವರು ದೇಸಾಯರ ನಿರ್ಮಲ ಹೃದಯದ ಮಾತುಗಳನ್ನು ಕೇಳಿದರು ಧರ್ಮೋದ್ಧಾರಕ್ಕಾಗಿ ಪರಿಶ್ರಮಿಸುವ ಅವರ ನಡೆತೆಗೆ ಎಲ್ಲ ಸಮಾಜದವರೂ ಸಕಲ ಗುಣ ಸಂಪನ್ನರಾಗಿ ಸರ್ವಸಮಾನ ಸಮತಾವಾದದ ಮನದ ಕಲ್ಪನೆಯ ಅವರ ಬೇಡಿಕೆಯನ್ನು ತಿರಸ್ಕರಿಸಲು ಒಪ್ಪದೆ 'ಎಲ್ಲವೂ ಶಿವಪ್ರೇರಣೆ' ಆತನ ವಿನಃ ಒಂದು ಹುಲ್ಲು ಕಡ್ಡಿಯೂ ಅಲುಗದೆಂದು ಅಂತರ್ಯದಲ್ಲಿ ಶ್ರೀಗುರು ಕಾಡಸಿದ್ಧೇಶ್ವರನಿಗೆ ಅಭಿನಂದಿಸಿ ದೇಸಾಯರಿಗೆ ಬರಲಿಕ್ಕೆ ಒಪ್ಪಿಗೆ ಕೊಟ್ಟರು. ಸಂಭ್ರಮವೇ ಸಂಭ್ರಮ ಗ್ರಾಮಸ್ಥರಿಗೆಲ್ಲ ಹಬ್ಬದ ವಾತಾವರಣದಂತಾಗಿ ಹೊಳೆಯಿಂದ ಹಡಗಲಿಯ ವರೆಗೆ ಬಹು ಸಡಗರದಿಂದ ದಾರಿಯುದ್ದಕ್ಕೂ

CC-0. Jangamwadi Math Collection. Digitized by eGangotri

ಮುತ್ತೈದೆಯರು ಹೂಗಳನ್ನು ಚಲ್ಲರಿಸಿ ಮಂಗಳಾರತಿ ಬೆಳಗುತ್ತ ಬರಮ್ಮ
ಕೊಂಡರು. ಶಿವಾಚಾರ್ಯ ಮಹಾಸ್ವಾಮಿಗಳು ತುಂಬಿದ ಹೊಳೆಯಲ್ಲಿ ವ
ದಿನಗಳ ವರೆಗೆ ಅನುಷ್ಠಾನಕ್ಕೆ ಕುಳಿತು ಹೊರಬಂದ ಮಹಾಪವಾಡಪು
ರೆಂದು ಸಾಕ್ಷಾತ್ ಶಿವನ ಅವತಾರಿಗಳೆಂದು ಊರಲ್ಲಿ ಸುತ್ತಮುತ್ತ ಗ್ರಾ
ಗಳಲ್ಲಿ ಪ್ರಸಿದ್ಧವಾಯ್ತು.

ದೇಸಾಯರು ಶ್ರೀಗಳು ಕುಳಿತು ಅನುಷ್ಠಾನ ಮಾಡಿದ ಸ್ಥ
ಗುರ್ತಿಗಾಗಿ ಶಿವಲಿಂಗ ಸ್ಥಾಪನೆ ಮಾಡಿದರು. ಅದಲ್ಲದೇ ತಮ್ಮ ಹೆ
ಗುರ್ತಿಗಾಗಿ ಹೊಳೆಯ ದಂಡೆಯ ಮೇಲೆ ರಾಮಲಿಂಗೇಶ್ವರ ದೇವಸ್ಥಾನವ
ಕಟ್ಟಿಸಿದರು, ಈಗಲೂ ಸಹ ಕಾಡಸಿದ್ಧೇಶ್ವರ ಲೀಲೆಯನ್ನು ಕಾಲಕಾಲ
ಸಾರಲು ನಿಂತಂತೆ ಹೊಳೆಯಲ್ಲಿ ಲಿಂಗ ಮತ್ತು ರಾಮಲಿಂಗೇಶ್ವರ ದೇವಸ್ಥಾ
ಗಳನ್ನು ಕಾಣಬಹುದು. ಶ್ರೀಗಳವರ ವಾಸಸ್ಥಾನಕ್ಕಾಗಿ ಕೆಲವು ದಿನ ಕಳೆಯು
ಪ್ರಶಾಂತವಾದ ಹೊಳೆಯ ದಂಡೆಯ ಮೇಲೆ ಮಠವನ್ನು ಸಹ ಕಟ್ಟಿಸಿದರು.
ನಿತ್ಯವೂ ಮಠದಲ್ಲಿ ತ್ರಿವಿಧ ದಾಸೋಹ ನಡೆಯಲೆಂದು ೨೮ ಎಕರೆ ಜಮೀನ
ದೇಸಾಯರು ದಾನರೂಪವಾಗಿ ಕೊಟ್ಟರು. ಪ್ರತಿದಿನವೂ ಶ್ರೀಗಳವರು
ಮತ ಧರ್ಮಗಳ ಸಮನ್ವಯ ಸಿದ್ಧಾಂತವೆನಿಸುವ ಷಟಸ್ಥಲದಾಚರಣೆಯ
ಅಷ್ಟಾವರ್ಣಗಳ ಕ್ರಮದಿಂದ ತ್ರಿಕಾಲವೂ ಲಿಂಗಪೂಜೆ, ಶಿವಭಜನೆ ಅನೇಕ
ಸತ್ಪುರುಷರ, ಶರಣ ಸಂತರ ಆತಿಥ್ಯ ಗುರುಲಿಂಗ ಜಂಗಮರ ದಾಸೋ
ಇವೆಲ್ಲಾ ಕ್ರಮಗಳಿಂದ ಕುಲಗೆಟ್ಟ ಗ್ರಾಮ ಸಮಾಜಕ್ಕೆ ಕಣ್ತೆರೆಳಕಾದ
ಕುಡಿಯಬಾರದನ್ನು ಕುಡಿಯುತ್ತ, ಮಾಡಬಾರದನ್ನು ಮಾಡುತ್ತ, ಅತ್ಯಾ
ಕೊಲೆ ಸುಲಿಗೆಗಳಿಂದ ಪ್ರತಿ ದಿನವೂ ಗುಂಪು ಗುಂಪುಗಳಲ್ಲಿ ಪಕ್ಷ ಪಂಗಡ
ಹಂಸ ರೂಪ ತಾಳಿ ದಾರಿಗೆಟ್ಟ ಅಂದಿನ ಜನ ಜೀವನಕ್ಕೆ ಮಾರ್ಗದರ್ಶಕರಾ
ವೀರ ವೈರಾಗ್ಯ ವಿರಕ್ತಿಗಳ ತಪಃ ಪ್ರಭಾವದಿಂದ ಅವರ ವಾಕ್‌ಸಿದ್ಧಿ ಪ್ರ
ವಾಯಿತು, ಕಣ್ನೋಟ ಕಲ್ಪತರುವಾಯ್ತು, ರೋಗಗ್ರಸ್ತರಾಗಿ ಈಗಲೋ
ಇನ್ನೊಂದು ಗಳಿಗೆಯಲ್ಲೋ ಸಾಯುವ ಸ್ಥಿತಿಯಲ್ಲಿದ್ದವರು ಶ್ರೀಗಳ ಕರ
ವಿಭೂತಿ ತಂದು ಭಸ್ಮ ಹಚ್ಚಿದಾಕ್ಷಣ ಬದುಕುವಂತಾದರು ಗೃಹಪಿಶಾ
ಕಾಟದಿಂದ ತಲ್ಲಣಗೊಂಡ ಎಷ್ಟೋ ಮನೆತನಗಳು ಶ್ರೀಗಳನ್ನು ಕರೆಯ
ಕೊಂಡು ಪಾದಪೂಜೆಮಾಡಿ ಪಾದೋದಕದ ಸಿಂಚನದಿಂದ ಪವಿತ್ರವಾಗಿ ಪುನ
ದ್ಧಾರಕರಾದರು, ಕರಿಸಾಲು ಬಿದ್ದು ಫಲಕೊಡದೆ ಪಾಳಾಗಿರ್ದ ಎಷ್ಟ

CC-0. Jangamwadi Math Collection. Digitized by eGangotri

ವೀನಗಳು ಶಿವಾಚಾರ್ಯ ಮಹಾ ಸ್ವಾಮಿಗಳ ಪಾದಸ್ಪರ್ಶದಿಂದ ಪುನೀತ
ಗೊಂಡು ವರ್ಷಾರು ತಿಂಗಳಲ್ಲಿ ಫಲವತ್ತಾಗಿ ಬೆಳೆದುನಿಂತವು. ಒಡಕಾದ ಕುಟುಂಬ
ಜೀವಿಗಳು ಒಂದಾಗಿ ಚಂದಾಗಿ ಬಾಳುವಂತಾದವು. ಒಟ್ಟಾರೆ ಅಸ್ತವ್ಯಸ್ತವಾಗಿ
ಸಾಗಿದ ಅಂದಿನ ಸಮಾಜಜೀವನ ಸುವ್ಯವಸ್ಥೆಯಿಂದ ಸ್ವಮೃದ್ಧಿಯಿಂದ ಸಾಗಹತ್ತಿತು
ವೈಯುಕ್ತಿಕ ಹಿತ ಚಿಂತನೆಗಳನ್ನು ಬದಿಗೊತ್ತಿ ಶ್ರೀಗಳು ದೇಸಾಯರಿಗೆ ಭಾಷೆ
ಕೊಟ್ಟಂತೆ ಸದಾಕಾಲ ಲಿಂಗಾಂಗಿಗಳಾಗಿ ವೀರಶೈವ ಧರ್ಮದ ಸಿದ್ಧಾಂತ
ಗಳನ್ನು ಸಕಲರೂ ಅಳವಡಿಸಿಕೊಳ್ಳುವಂತೆ ಅಹೋರಾತ್ರಿ ಪ್ರಯತ್ನಪಟ್ಟರು.
ಹಣ್ಣೆಲೆ ಉದುರುವದು ಹಸಿರೆಲೆ ಚಿಗಿಯುವದು ನಿಸರ್ಗ ನಿಯಮದಂತೆ
ಮುಂದಿನ ಈ ಪೀಠಕ್ಕೆ ತಕ್ಕವರನ್ನು ನಿಯಮಿಸಿ ಹಣ್ಣುಹಣ್ಣಾದ ಶಿವಮಯ
ವಾದ ಸ್ಥೂಲ ಶರೀರದ ಜೀವಾತ್ಮನನ್ನು ಪರಮಾತ್ಮನಲ್ಲಿ ಲೀನಗೊಳಿಸಿದರು.
ಲಿಂಗದೇಹವನ್ನು ಘನಲಿಂಗದೊಳೈಕ್ಯಗೊಳಿಸಿ ಅಮರರಾದರು. ಜನ ಮನದಲ್ಲಿ
ಎಷ್ಟೋ ಕಾಲ ಜೀವಂತರಾಗಿ ತೋರಿದರು. ಈಗಲೂ ಶ್ರೀಗಳವರ ಕರ್ತೃ
ಗದ್ದುಗೆ ಇರುತ್ತದೆ.

ಸೃಷ್ಟಿಯ ಆರಂಭದಿಂದ ತಿರುಗುತ್ತಿರುವ ಕಾಲಚಕ್ರದ ಗತಿಯನ್ನು
ತಡೆಗಟ್ಟಲು ಯಾರೂ ಸಮರ್ಥರಲ್ಲ. ಅಣಿಮಾದಿ ಅಷ್ಟ ಸಿದ್ಧಿಗಳಿಂದ ಪ್ರಸಿದ್ಧ
ರಾಗಿದ್ದರೂ, ದೇವಾಂಶ ಸಂಭೂತರಿದ್ದರೂ ಕಾಲಚಕ್ರಯುಗದಿಂದ ಯುಗಕ್ಕೆ
ಪರಿವರ್ತನೆ ಹೊಂದುತ್ತ ಸಾಗುತ್ತಲೇ ಬಂದಿದೆ ಕ್ರಾಂತಿ ಉತ್ಕ್ರಾಂತಿಗಳಿಂದ
ಸಂಘರ್ಷಗಳು ಸಂಭವಿಸಿ ಭಾರತೀಯ ಸನಾತನ ಸಂಸ್ಕೃತಿಗಳು, ಆದರ್ಶ
ಸಿದ್ಧಾಂತಗಳು ಪರಕೀಯರ ದಬ್ಬಾಳಿಕೆಯಿಂದ ತತ್ತರಿಸುತ್ತ ಬೀಳುತ್ತ
ಏಳುತ್ತ ಶ್ರೀ ಶ್ರೀ ಶ್ರೀ ಕಾಡಸಿದ್ಧರಂತ ಮಹಾತ್ಮರ ದೈವೀತೇಜದಿಂದ ಮತ್ತೆ
ಮತ್ತೆ ಪುನರುತ್ಥಾನ ಹೊಂದುತ್ತಲೇ ಇದ್ದವು ಸ್ವದೇಶ ಸ್ವಧರ್ಮಗಳ
ಜೀವಿತನವ ಕೆಚ್ಚು ಅಭಿಮಾನಗಳಿಂದ ಹೊರಹೊಮ್ಮುತ್ತಲೇ ಇದ್ದವು ಹಡಗಲಿಯ
ಪೀಠಕ್ಕೆ ಅದೇ ವಂಶಜರನ್ನು ಅಧಿಕಾರಿಗಳನ್ನಾಗಿ ನಿಯಮಿಸಿ ಹಿಂದಿನ
ಶ್ರೀಗಳು ಹಾಕಿಕೊಟ್ಟ ಮಾರ್ಗದಲ್ಲಿ ಅನೇಕ ವರ್ಷಗಳ ಪರಿಯಂತ ತನ್ನ
ದಾರಿದಾದ ಪರಂಪರೆಯನ್ನು ಮುನ್ನಡೆಸಿಕೊಂಡು ನಡೆದಿದ್ದರು ಜನರು.
ಇದರಲ್ಲಿ ಆರನೆಯ ಪೀಠಾಧಿಕಾರಿಗಳಾದ ಶ್ರೀ ಶ್ರೀ ಶ್ರೀ ಕಾಡಸಿದ್ಧರೆಂಬವರು
ಮಠದ ಮಹಿಮೆಯನ್ನು ಮತ್ತೆ ಬೆಳಗಿಸಿದರು. ಅವರು ಮಹಾ ತಪಸ್ವಿ
ಗಳು ತ್ರಿಕಾಲವೂ ಲಿಂಗಪೂಜಾ ನಿಷ್ಠರು ಆಗಿದ್ದರು.

CC-0. Jangamwadi Math Collection. Digitized by eGangotri

ಷಟ್‌ಸ್ಥಲ ಬ್ರಹ್ಮಗಳಾಗಿ ಅಷ್ಟಾವರಣದಾಚಾರದಲ್ಲಿ ಶ್ರೇಷ್ಠತೆಯನ್ನು
ಹೊಂದಿದ್ದರು. ವೀರಶೈವ ಧರ್ಮವೆಂದರೇ ಮೂಢನಂಬಿಕೆ ಎನಿಸಬಾರದೆಂ
ಲೋಕಾಚಾರದ ಅನೇಕ ಡಂಭಾಚಾರಗಳನ್ನು ಖಂಡಿಸಿ ಜನತೆಯು
ಹಸನಾಗಿ ಸಾಗುವಂತೆ ವ್ಯಕ್ತಿತ್ವವು ಶುಚಿತ್ವಗೊಂಡು ವಿಕಾಸಗೊಳ್ಳುವ
ತಮ್ಮ ನಡೆ ನುಡಿಗಳಿಂದ ಆಚರಿಸಿ ಅನುಗ್ರಹಿಸಿ ಲೋಕ ಜೀವಿಗಳ ಪ್ರೀತಿ
ಪಾತ್ರರಾಗಿದ್ದರು. ಕನ್ನಡದ ಗಾದೆಯು ಮಾತುಗಳಲ್ಲಿ ಮುಂದ್ದಾದ
ವಿಡಂಬನಾತ್ಮಕ ವಾಕ್ಯವಿದೆ, "ಆಚಾರ ಹೇಳುವದಕ್ಕೆ ಬದನೆಕಾಯಿ ತಿನ್ನುವ
ಕ್ಕೆ" ಎಂಬಂತೆ ಕೇವಲ ಆಚಾರ ವಿಚಾರಗಳನ್ನು ಹೇಳುವದಕ್ಕಿಂತ ಸ್ವ
ಆಚರಿಸಿ ಅನುಗ್ರಹಿಸುವ ದಾರ್ಶನಿಕರಿದ್ದರೆ ಮಾತ್ರ ಅವರ ಸಾಧನೆ ಸಿದ್ಧಿಗಳ
ಫಲಿಸುವವು, ಬಾಯಿಂದ ಬೇಕಾದಷ್ಟು ಮಾತನಾಡಬಹುದು ಆದರೆ ಮೌನ
ನಾಡುವಷ್ಟು, ನಾಲಿಗೆ ಮಾತನಾಡದೆ ಸೋತು ಬೀಳುವದು ಸಹಜ. ಅದರ
ಹೆಚ್ಚಿಗೆ ಮಾತನಾಡದ ಕತ್ರುತ್ವ ಶಕ್ತಿಯು ಅವರ ಪೂಜಾನುಷ್ಠಾನದ ದಿವ್ಯತೇ
ಸ್ಸಿಗೆ ಶಿವಮಯವಾದ ಅವರ ಹೃದಯಾಂತಃ ಕರುಣದ ಓಜಸ್ಸಿಗೆ ಮಠಕ್ಕೆ ಹೊ
ದಿದ ವಿಸ್ತೀರ್ಣ ಜಾಗೆಯು ತೋಟವು ಬಹು ಸುಂದರವಾಗಿ ಬೆಳೆದಿತ್ತು
ತೆಂಗು ಬಾಳೆ ನೀರಲ ಪೇರಲ ಮಾವು ದಾಳಿಂಬದ ಅನೇಕ ಫಲವೃಕ್ಷಗಳು
ತುಂಬಿದ ಫಲಗಳನ್ನು ಹೊತ್ತುನಿಂತಿವೆ, ದೇವಲೋಕದ ಕಲ್ಪವೃಕ್ಷವೆನಿಸು
ಸುವಾಸನೆಯ ರಸ ಹೊತ್ತು ಮಲ್ಲಿಗೆ, ಸಂಪಿಗೆ, ಜಾಜೀ. ಚಂಪಕ ಪುಷ್ಪಗ
ನಿತ್ಯವೂ ಶ್ರೀಗಳ ಪೂಜೆಗಾಗಿ ಅರಳಿ ಹಾದು ಹೋಗುವ ದಾರಿಕಾರರ
ಕೈಮಾಡಿ ಕರೆಯುತ್ತಿದ್ದವು. ಶ್ರೀಗಳವರ ಶಿವಪೂಜೆ ಪ್ರತ್ಯಕ್ಷ ಕೈಲಾಸನಾ
ಸಂದರ್ಶನದಂತೆ ಅನಿಸುತ್ತಿತ್ತು. ಕುಸುಮಗಳ ರಸವನೀಂಟಲು ಮರಿದುಂ
ಗಳು ಹಾರಿಬರುವಂತೆ ಶ್ರೀಗಳ ಪೂಜಾಸಮಯದಲ್ಲಿ ಅನೇಕ ಜನ ಕೂಡಿ ಆ
ಪಾದ ಪದ್ಮಗಳಿಗೆ ಮಣಿದು ಪುಣೀತರಾಗುತ್ತಿದ್ದರು. ಹಕ್ಕಿಪಕ್ಕಿಗಳ ಸುಮಧು
ಸ್ವರದಿಂದ ಕೋಗಿಲೆಯ ಜೋಗುಳದ ಧ್ವನಿಯಲ್ಲಿ ಹಸನಾಗಿ ಹರಿವಹೊ
ಕಲರವದಲ್ಲಿ ಹಸಿರು ಹಾಸಿಗೆ ಚೆಲ್ಲಿ ವಿಶ್ವಗೀತೆ ಓಂಕಾರನಾದದಿಂದ ಶ್ರೀ
ವರ ಪೂಜೆ ಜಗವೆಂಬ ತೊಟ್ಟಿಲನ್ನೇ ತೂಗುವಂತಿತ್ತು.

ದಿನನಿತ್ಯವೂ ಸಗ್ಗ ಸದನದ ಸೌಭಾಗ್ಯವೇ ಧರೆಗಿಳಿದಂತೆ ಅನಿಸುತ್ತಿ
ಭಕ್ತಸ್ತೋಮದಲ್ಲಿ ಜನಪ್ರಿಯವಾಗಿದ್ದ ಈ ಪೀಠದ ಘನತೆಯನ್ನು ತಗ್ಗಿ
ಅನೇಕ ಪಟ್ಟಭದ್ರಹಿತಾಶಕ್ತಿಗಳು ಅಲ್ಲಲ್ಲಿ ತಲೆ ಎತ್ತಿ ಚಿಂತನ ಕೊಡಲ

CC-0. Jangamwadi Math Collection. Digitized by eGangotri

ಕಾವು ಕುಲಕ್ಕೆ ಮೂಲವೆಂಬಂತೆ ಶಿವಾನುಭವದ ತತ್ವಾರ್ಥದ ನಿಜವನರಿಯದೆ ಹೊಲಬುಗೆಟ್ಟ ಡಂಭಾಚಾರಿ ಕೆಲವು ಜನರಿಂದ ಅನೇಕ ತೊಂದರೆಗಳು ಬಂದರೂ "ಸಟೆ ದಿಟವೆಂಬುವೆರಡುವಿಡಿದು ನಡೆವುದೀಲೋಕವೆಲ್ಲವೂ, ಸಟೆ ದಿಟವೆಂಬುವೆರಡುವಿಡಿದು ನಡೆವ ಲೋಕದಲ್ಲಿ ಶರಣನು ಗುರುಲಿಂಗ ಜಂಗಮದಲ್ಲಿ ಸಟೆಯ ಬಳಸಿದೊಡೆ ಆತನು ತ್ರಿವಿಧಕ್ಕೆ ದ್ರೋಹಿ, ಅಘೋರ ನರಕ ಉಂಬುದಲ್ಲ ಕಿಲ್ಬಿಷ ತಿಂಬುದೆಲ್ಲ ಅಡಗು, ಕುಡಿವುದೆಲ್ಲ ಸುರೆ, ಹುಸಿಎಂಬುದೇ ಹೊಲೆ, ಶಿವಭಕ್ತಂಗೆ ಹುಸಿಎಂಬುದುಂಟೇ ಅಯ್ಯಾ ಹುಸಿಯನಾಡಿ ಲಿಂಗವ ಪೂಜಿಸಿದೊಡೆ ಹೊಳ್ಳ ಬಿತ್ತಿ ಫಲವ ನರಸುವಂತೆ ಕಾಣಾ ಚನ್ನಮಲ್ಲಿಕಾರ್ಜುನಾ" ಎಂದು ಹೇಳಿದ ಅಕ್ಕನ ವಿರಕ್ತವಾಣಿಯಂತೆ ತಮ್ಮ ವಿರುದ್ಧ ಎಂಥಹ ಅಪವಾದಗಳು ಬಂದರೂ ತಮ್ಮ ನಿಜವಾದ ಆಚರಣೆಗಳನ್ನು ಬಿಟ್ಟಿರಲಿಲ್ಲ. ಎಂಥ ಸಂದಿಗ್ಧ ಗಂಡಾಂತರ ಪ್ರಸಂಗಗಳೆಲ್ಲವೂ ಸರಿದು ಪುಟಕ್ಕಿಟ್ಟ ಚಿನ್ನದಂತೆ ಮತ್ತಿಷ್ಟು ತೇಜೋಮಯವಾಗಿ ಶ್ರೀಗಳವರ ಧವಲ ಕೀರ್ತಿ ಬೆಳಗುತ್ತಲೇ ಇತ್ತು.

ಭಾರತೀಯ ಸನಾತನ ಹಿಂದೂ ಧರ್ಮದ ಹುಟ್ಟನ್ನಡಗಿಸಲು ಅನೇಕ ಪರಧರ್ಮಗಳು ಬಹು ಕಾಲದ ಹಿಂದಿನಿಂದಲೂ ಶಕ್ತಿ ಮೀರಿ ಪ್ರಯತ್ನ ಮಾಡುತ್ತಲೇ ಬಂದಿವೆ, ಪರರಾಷ್ಟ್ರಗಳು ಕೋಟ್ಯಾನುಕೋಟಿ ಹಣ ಕೂಡಾ ಹೊಳೆಯಂತೆ ಹರಿಸಿರುತ್ತವೆ. ಅದರಲ್ಲೂ ಇಸ್ಲಾಂ ಧರ್ಮದ ದೊರೆಗಳು ಅನೇಕ ಅತ್ಯಾಚಾರ, ಅನಾಚಾರಗಳಿಂದ ಹಿಂದುತ್ವದ ಧ್ವಂಸಕ್ಕಾಗಿ ದಬ್ಬಾಳಿಕೆ ಮಾಡಿರುವದು ಇತಿಹಾಸ ಘಟನೆಗಳಿಂದ ನಮಗೆ ಸಹಜವಾಗಿ ತಿಳಿದುಬರುವದು. ವಿಶ್ವದ ಧಾರ್ಮಿಕ ಕ್ಷೇತ್ರದಲ್ಲಿ ಸತ್ಯವಸ್ತುವಿನ ದರ್ಶನಕ್ಕೆ ಸಹಸ್ರಾರು ಮುಖಗಳಿವೆ. ಎಲ್ಲಾ ಧಾರ್ಮಿಕರದು ಒಂದೊಂದು ಮುಖದರ್ಶನ ಮಾತ್ರ ಒಂದೇ ಸತ್ಯಾನ್ವೇಷಣೆಗಾಗಿ ಪರಿಶ್ರಮಿಸುವ ವ್ಯಕ್ತಿ ತನ್ನ ಶಕ್ತಿ ಸಾಮರ್ಥ್ಯಗಳಿಗಣುಸರಿಸಿ ತನಗೆ ಬೇಕಾದ ಧಾರ್ಮಿಕನಾಗಬಹುದು, ಯಾವ ಧರ್ಮವೂ ತನ್ನಷ್ಟಕ್ಕೆ ತಾನು ಅಸಮರ್ಥ ವಿರುವದಿಲ್ಲ. ಸಮರ್ಥ ಸತ್ಪುರುಷರ ಜನನದಿಂದ ಹೊಸರೂಪ ತಾಳಿ ಶ್ರೀಮಂಶಗೊಳ್ಳುತ್ತದೆ. ಅದಕ್ಕಾಗಿ ನಾವು ಅಂಥವರನ್ನು ಮಹಾತ್ಮರೆನ್ನುತ್ತೇವೆ, ಪವಾಡ ಪುರುಷರೆನ್ನುತ್ತೇವೆ, ಮಹಾತಪಸ್ವಿಗಳೆನ್ನುತ್ತೇವೆ, ಲೌಕಿಕ ಜಗತ್ತಿಗೆ ತಮ್ಮ ಅಲೌಕಿಕ ಚೇತನಾಶಕ್ತಿಯನ್ನಿತ್ತು ದೈವ ತೇಜದಿಂದ ಬೆಳಗುತ್ತಿರುವ ಅಂಥವರನ್ನು ಸಿದ್ಧಿ ಪುರುಷರೆಂದು ಕೂಡಾ ಕರೆಯುತ್ತೇವೆ, ಹೀಗಿದ್ದು ಶ್ರೀ ಕಾಡಸಿದ್ದೇಶ್ವರ ತೊಂಭತ್ತೆಂಟನೆ ವರುಷದ ಜೀವನ ಪ್ರಯಾಣದಲ್ಲಿ

CC-0. Jangamwadi Math Collection. Digitized by eGangotri

ಅತ್ಯಂತ ರೋಮಾಂಚಕಾರಿ ಕುತೂಹಲಭರಿತ ಘಟನೆ ಜರುಗಿತು, ದಿಲ್ಲಿ
ರಾಜ್ಯಾಡಳಿತಕ್ಕೊಳಪಟ್ಟು ನಡೆಸಿಕೊಂಡು ಬಂದಿದ್ದ ಬಿಜಾಪುರ
ಮುಸಲ್ಮಾನ ದೊರೆ ಅಲ್ಲಲ್ಲಿ ಬೇಟೆಯಾಡುತ್ತ ಸಂಚಾರ ಮಾಡುತ್ತ ಹ
ಗ್ರಾಮಕ್ಕೆ ತನ್ನ ಕಾಲ್ದಾಳು ಸಮೇತ ಬಿಡಾರ ಹೂಡಿದನು. ಹೋ
ದಂಡೆಯ ಮೇಲಿದ್ದ ಭೂಲೋಕದ ನಂದನವನದಂತಿದ್ದ ಫಲ ತುಂ
ಕಾಡಸಿದ್ಧೇಶ್ವರ ತೋಟದ ಮೇಲೆ ಈತನ ಕಾಕದೃಷ್ಟಿ ಬಿದ್ದಿತು, ಅ
ಮಹಾತ್ಮೆಯನ್ನು ತಿಳಿಯದೆ ಚಾಡಿಕಾರರ ಬಾಯಿಂದ ಏನೇನೋ ಕೇಳಿ
ಮೊದಲೇ ಕುಲ್ಲಾಭಿಮಾನಿ ಅನ್ಯ ಮತಗಳ ಏಳ್ಗೆಯನ್ನು ಸಹಿಸದ ಸ್ವಾರ್ಥಿ ಅ
ಎದೆ ಹುತ್ತದೊಳಗೆ ಪ್ರತಿಕಾರದ ನಾಗಿಣಿ ಕೆರಳಿ ಘೂತ್ಕರಿಸಹತ್ತಿತು ಸಂಸಾ
ವನ್ನು ತ್ಯಾಗ ಮಾಡಿದ ಈ ಜಂಗಮ ಜೋಗಿಗೆ ಇಷ್ಟೊಂದು ಸಡಗ
ತೋಟ, ಮಠ, ಮನೆ ಇವೆಲ್ಲಾ ಯಾಕೆ ವಿರಕ್ತರಂತೆ ಸನ್ಯಾಸಿಗಳಂತೆ ಇಲ್ಲಿ
ಎಲ್ಲರ ಕೊರಳಲ್ಲಿ ಲಿಂಗವನ್ನು ಕಟ್ಟುತ್ತ ಕೇವಲ ತಮ್ಮ ಧರ್ಮವನ್ನು ಬೆಳೆಸು
ಸೋಗಿನ ಸಾಧುಗಳು, ಮೋಸದ ಮಾಯಾವಿಗಳು ಎಂದು ಸೂರ್ಯ
ಉದಯವನ್ನು ಶಪಿಸುವ ಗೂಗೆಯಂತೆ, ಪತಿವ್ರತೆಯ ನಿಂದಿಪ ಜಾರಿಣಿಯ
ಅವನ ಮನದಲ್ಲಿ ಅನೇಕ ವಿಕಾರಗಳು ಹೆಡೆಎತ್ತಿ ನಿಂತವು. ವಿಕಾರಕ್ಕೆ ವ
ರಾದವರು ಎಂಥ ವಿಧ್ವಂಸಕ ಕೆಲಸ ಮಾಡಲು ಹೇಸುವಂತಿಲ್ಲ. ತನ್ನ ಕಾಲ್ದಾ
ಗಳಿಗೆ ಥಟ್ಟನೇ ಹೇಳಿದ, "ಸಿಪಾಯಿಗಳೇ; ಈ ತೋಟದಲ್ಲಿ ಬೆಳೆದು ನಿ
ಎಲ್ಲ ಫಲಗಳನ್ನು ಲೂಟಿ ಮಾಡಿ ಗಿಡಗಳೆನ್ನೆಲ್ಲ ಕತ್ತರಿಸಿ ಕತ್ತರಿಸಿ ಹಾಕಿ
ವಿಷ ಮಿಶ್ರಿತ ಸುಣ್ಣದ ಪುಡಿಯನ್ನು ಎಲ್ಲಾ ಕಡೆಗೆ ಹಾಕಿ ಮತ್ತೆ ಬೆಳೆ
ದಂತೆ ಮಾಡಿರಿ. ಶರಣರಂತೆ ಮಹಾತ್ಮರಂತೆ" ಎಂದು ನಗುತ್ತ ಹ
ತನ್ನ ಶಿಬಿರಕ್ಕೆ ಹೋದನು. ಆ ಸಮಯದಲ್ಲಿ ಶ್ರೀಗಳು ಲಿಂಗಾರ್ಚ
ಮಾಡುತ್ತ ಅನುಷ್ಠಾನದಲ್ಲಿ ಮೈಮರೆತಿದ್ದರು. ಹಠಯೋಗದ ದೀಕ್ಷೆ ತೊಟ್ಟ
ವಿದೇಹ ಸ್ಥಿತಿ ಹೊಂದಿ ಬ್ರಹ್ಮಾನುಭವದಲ್ಲಿ ಸ್ಥಿತ ಪ್ರಜ್ಞರಾಗಿ ಕುಳಿತಿದ್ದ
ಮರುಳಸಿದ್ಧನೆಂಬ ಶ್ರೀಗಳ ಸೇವಾಸಕ್ತನು ತೋಟದಲ್ಲಿ ನಡೆಯುತ್ತಿರು
ಹಾಹಾಕಾರವನ್ನು ತಡೆಗಟ್ಟಲು ಎಷ್ಟು ಪ್ರಯತ್ನ ಮಾಡಿದರೂ ಸಾಧ್ಯವಾ
ಲಿಲ್ಲ. ಅರಸನೇ ದಾರಿತಪ್ಪಿ ನಡೆವಾಗ ಅವನ ಕೈತುತ್ತಿನಲ್ಲಿ ಬೆಳೆದ ಸಿಪಾಯಿ
ಗಳು ನ್ಯಾಯವಾಗಿ ನಡೆಯುವರೆ ? ಮನದಲ್ಲಿ ಮತ್ಸರ ತುಂಬಿಕೊಂಡ
ಹೀನರಿಗೆ ಏನು ಹೇಳಿದರೇನು ? ಇದ್ದಲಿಯ ಹಾಲಿನೊಳು ಎದ್ದಿ ತೆಗೆದ
ಶುದ್ಧಾದ ಬಿಳುಪು ತಳೆದೀತೆ ? ಅನುಭಾವ ತಿಳಿಯದ ಆರ ಮರುಳರಿಗೆ

CC-0. Jangamwadi Math Collection. Digitized by eGangotri

ಬೋರ್ಗಲ್ಲ ಮೇಲೆ ಮಳೆ ಸುರುವಿದಂತೆ ವ್ಯರ್ಥ. ಅದರಂತೆ ಮರುಳಸಿದ್ಧನು ಎಷ್ಟು ಪರಿಯಿಂದ ಪರಿತಪಿಸಿದರೂ ಎರಡು ಮೂರು ದಿನ ಬಿಟ್ಟುಬಿಡದೇ ಸಂಪದ್ಭರಿತ ವನಶ್ರೀಯ ಸೌಭಾಗ್ಯವನ್ನೆಲ್ಲ ಹಾಳು ಮಾಡಿದರು. ಮತ್ತೆ ತೋಟದ ತುಂಬ ವಿಷ ಮಿಶ್ರಿತ ಸುಣ್ಣದ ಪುಡಿಯನ್ನು ಬೆರೆಸಿ ಎಂದೆಂದೂ ಬೆಳೆಯಬಾರದೆಂದು ಸರ್ವನಾಶ ಮಾಡಿ ಹೋದರು. ಕುಲುಕುಲು ನಗುತ್ತಲಿದ್ದ ತೋಟದ ಗಿಡಬಳ್ಳಿಗಳೆಲ್ಲಾ ಹೇಳಹೆಸರಿಲ್ಲದಂತಾದವು ಅಳಿದುಳಿದು ಮರಗಳು ಒಣಗಿ ಒಣಗಿ ತಪ್ಪಲೆಲ್ಲಾ ಉದುರಿಬಿದ್ದವು. ಶಿಷ್ಯನು ದುಃಖಿತನಾಗಿ ಶ್ರೀಗಳ ವರ ಅನುಷ್ಠಾನವು ಮುಗಿಯುವ ವರೆಗೆ ತನ್ನೆದೆಯ ಮೂಕ ವೇದನೆಯನ್ನು ಹಾಳು ಬಿದ್ದ ತೋಟದ ಒಂದು ಮೂಲೆಯಲ್ಲಿ ಅನುಭವಿಸುತ್ತ ಕುಳಿತಿದ್ದನು. ಕಾಡಸಿದ್ಧ ಶ್ರೀಗಳು ತಮ್ಮ ಅನುಷ್ಠಾನವನ್ನು ಸಂಪೂರ್ಣಗೊಳಿಸಿ ತಮ್ಮ ಹತ್ತಿರದಲ್ಲಿ ಇರಬೇಕಾಗಿದ್ದ ಮರುಳಸಿದ್ಧನನ್ನು ಕಾಣದಂತಾಗಿ ಹಣ್ಣು ಹಣ್ಣಾದ ಮುಪ್ಪಿನ ಶರೀರದ ಕಾಲುಗಳಿಂದ ನಡಗುತ್ತ ಮೆಲ್ಲನೇ ಹೊರಗೆ ಬಂದು ಕೂಗಿದರು. ಮರುಳಸಿದ್ಧನು ಧಾವಿಸಿ ಬಂದು ನಡೆದ ವೃತ್ತಾಂತವನ್ನು ಶೋಕ ಸಂತೃಪ್ತ ಹೃದಯದಿಂದ ಶ್ರೀಗಳಿಗೆ ಅರಿಕೆ ಮಾಡಿದನು. ಶ್ರೀಗಳು ನಗುತ್ತ "ನೋಡಪ್ಪಾ ಬೇಟೆಗಾರನೊಬ್ಬ ಅನೇಕ ಜೇಟೆಗಳನ್ನಾಡಿ ಅವುಗಳ ಪ್ರಾಣ ಹಿಂಡಿ ಅವರಿಂದ ತನ್ನೊಡಲನ್ನು ತುಂಬಿಕೊಳ್ಳುವನು, ತನ್ನ ಮನೆಯಲ್ಲಿ ಯಾರಾದರೂ ಸತ್ತರೆ ಬಿಕ್ಕಿಬಿಕ್ಕಿ ಅಳುವನು. ಇಂಥ ಭೇದ ಜ್ಞಾನವಿದ್ದ ಮೂಢ ಮತಿಗಳು ಯಾರಿದ್ದರೂ ಸರಿ ಅವರಿಂದ ಹಿಂಸಾ ಕೆಲಸಗಳು ನಡದೇತೀರುತ್ತವೆ. ಇದಕ್ಕೇಕೆ ಶೋಕಪಡುತ್ತಿ ವೀರಶೈವ ತತ್ವದ ಪರಮ ವಿಚಾರ ತಿಳಿದ ಶರಣ ನೀನು. ನಮಗೆ ಯಾರ ದ್ವೇಷವೂ ಬೇಡ ಲಿಂಗ ದೀಕ್ಷಿತರಾದ ನಾವು ಸದಾ ಸಕಲರಿಗೆ ಲೇಸನ್ನು ಬಯಸುತ್ತ ಬಹಿರ್ಘಟನೆಗಳಿಗೆ ಬೆದರದೆ ಬೆಚ್ಚದೆ ನಮ್ಮ ಲಕ್ಷವನ್ನು ಅಂತರಂಗದ ಶಿವಾತ್ಮನಲ್ಲಿ ಕೇಂದ್ರೀಕರಿಸಬೇಕು. ಇದೆಲ್ಲವೂ ಶಿವನ ಲೀಲಾವಿಲಾಸವೆಂದು ಸಂತೋಷಪಟ್ಟುಕೊಳ್ಳಬೇಕು. ಅದಕ್ಕಿಂದೇ ಅಣ್ಣ ಬಸವಣ್ಣನವರು ನಾಳೆ ಬಪ್ಪುದು ಇಂದೇ ಬರಲಿ ಇಂದು ಬಪ್ಪುದು ಈಗಲೇ ಬರಲಿ ಎಂದು ಹೇಳಿದ್ದಾರೆ. ಹೋಗು ಒಂದು ತಂಬಿಗೆ ತಕ್ಕೊಂಡು ಬಾ ನಾವು ಲಿಂಗಪೂಜೆ ಮಾಡಿ ಈಗಲೇ ಪಾದೋದಕ ಮಾಡಿಕೊಡುತ್ತೇವೆ. ಅವುಗಳನ್ನು ತೋಟದ ತುಂಬೆಲ್ಲಾ ಹಾಕಿ ಬಾ" ಎಂದು ಹೇಳಿದರು.

CC-0. Jangamwadi Math Collection. Digitized by eGangotri

ತಮ್ಮಾದನ್ನು ನಾಶ ಮಾಡಿದರೂ ದ್ವೇಷ ಭಾವ ಎನಿತೂ ತಾ
ಲಿಂಗಾನುಷ್ಠಾನದಲ್ಲಿ ಹತಾಶರಾಗದೇ ಪರಿಶುದ್ಧ ಭಾವದಿಂದ ಲಿಂಗ
ಮಾಡಿ ಪಾದೋದಕವನ್ನು ಮರುಳ ಸಿದ್ಧನ ಕೈಯಲ್ಲಿ ಕೊಟ್ಟರು ಆತನು ತೋ
ದ್ದ ತುಂಬೆಲ್ಲಾ ಹೊಡೆದನು, ಹೀಗೆ ನಿತ್ಯವೂ ತ್ರಿಕಾಲ ಶ್ರೀಗಳವರ ಪಾದೋ
ದಿಂದ ಹಾಳು ಬಿದ್ದ ತೋಟಕ್ಕೆ ಪುನಃ ಚೈತನ್ಯ ತುಂಬಲು ಪ್ರಾರಂಭವಾ
ಅಷ್ಟಾವರ್ಣದಾಚಾರದ ಶ್ರೇಷ್ಠತೆಯ ಕುರುಹಾಗಿ ಕಾಡಸಿದ್ಧರ ಪವಿತ್ರ ಪಾದೋ
ದಕ ಅಭಿಷೇಕದಿಂದ ಕತ್ತರಿಸಿಗೊಂಡ ಮರಗಳೆಲ್ಲಾ ಚೇತರಿಸಿಕೊಂಡು ಚಿ
ಹತ್ತಿದವು, ವಸುಧೆಯಲ್ಲಿ ಬೆಳೆದ ಈ ವೃಕ್ಷಂಗಳೆಲ್ಲಾ ಕಲ್ಪವೃಕ್ಷ
ಕಂಗೊಳಿಸಹತ್ತಿದವು.

ಕತ್ತಲೆಯು ಬೆಳಕಿನೊಂದಿಗೆ ಹೋರಾಡಿ ಗೆಲ್ಲಬಹುದೆ ?
ದೊಡನೆ ಸೆಣಸಾಡಬಲ್ಲದೆ ಶೃಗಾಲ (ನರಿ) ದೇವ ಲೋಕದ ಕಲ್ಪತರುವಿನ
ಭೂಲೋಕದ ಗಿಡಮರಬಳ್ಳಿಗಳ ಸ್ಪರ್ಧೆಯೆ ? ಕಾಮ ಧೇನುವಿನ
ಲೋಕದ ಹಸುಗಳ ತಿಕ್ಕಾಟವೆ ? ಸಾಮಾನ್ಯ ಕಲ್ಲು ಎಷ್ಟು ಹೊಳೆ
ಪುರುಷಮಣಿಯ ಸಮನಾಗಬಲ್ಲುದೆ ? ಅದರಂತೆ ಸದಾಶಿವನನ್ನು ಹೃ
ಪೀಠದಲ್ಲಿ ಕಾಣುತ್ತ ಪ್ರಾಣವನ್ನು ಲಿಂಗಕ್ಕರ್ಪಿಸಿದ ಮಹಾಮಹಿಮ
ಯೋಗಿವರೇಣ್ಯರನ್ನು ಹುಡುಗಾಟಕ್ಕಾಗಲಿ ಅಥವಾ ಅವಿವೇಕದಿಂದ
ಹಿಯಾಳಿಸಿ ಹೀನ ಕೃತಿಗಳನ್ನು ಮಾಡಿದರೆ ಪ್ರಾಯಶ್ಚಿತ್ತವು ಬಿಡಬಹುದೆ
ಬೆಂಕಿಯನ್ನು ಉಡಿಯಲ್ಲಿ ಕಟ್ಟಿಕೊಂಡರೆ ಸುಡಲಾರದೇ ಬಿಡುವದು
ಇತ್ತ ಕಾಡಸಿದ್ಧ ಶ್ರೀಗಳ ತೋಟವು ದಿನದಿಂದ ದಿನಕ್ಕೆ ಬೆಳೆದಂತೆ ಬಿಜಾಪು
ಸುಲ್ತಾನನಿಗೆ ಸಣ್ಣಾಗಿ ಹುಟ್ಟಿದ ಹೊಟ್ಟೆನೋವು ದಿನಗಳೆದಂತೆ ಬಲ
ಬಾಧೆಕೊಡಹತ್ತಿತು. ನಿಪುಣ ವೈದ್ಯರಿಗೂ ಗುಣಹೊಂದದಾಯ್ತು.
ನೋವನ್ನು ಸಹಿಸದೇ ದಿನದಿಂದ ದಿನಕ್ಕೆ ಕೃಶವಾಗುತ್ತ ನಡೆದನು.
ದರಲ್ಲಿ ಗೂಢಚಾರಿಗಳು ಹಡಗಲಿ ತೋಟದ ಮಹಿಮೆಯನ್ನು ತಿಳಿಸ
ಸುಲ್ತಾನನ ಹೃದಯಕ್ಕೆ "ಸುಣ್ಣದ ಭಟ್ಟಿಗೆ ನೀರು ಸುರುವಿದಂತಾ
ನಾಲ್ಕಾರು ತಿಂಗಳ ಹಿಂದೆ ತಾನು ಮಾಡಿದ ಅನೀತಿಯ ಕೆಲಸಕ್ಕೆ ಕಾಲ
ಪ್ರತಿಕೂಲವಾಗಿ ತನಗಿಂದು ಕಾಡುತ್ತಿರಬಹುದೆ ? ಎಂಬ ಸಂಶಯ
ಪುಟಿದೆದ್ದವು. ದುರಾಶೆಯಿಂದ ಹಿಂಸೆ ಮಾಡಿದ್ದಕ್ಕೆ ಮನವು ಪ್ರಾಯ
ಪಡಹತ್ತಿತು. ಮತ್ತೆ ಬೇಟೆಯ ನೆವದಿಂದ ತನ್ನ ಕಾರಭಾರಿ ಕಾಲ್ದಳಗಳೊ

CC-0. Jangamwadi Math Collection. Digitized by eGangotri

ಬಂದನು. ಶ್ರೀಗಳವರ ತೋಟವು ತಾನು ಮೊದಲಿಗೆ ನೋಡಿದ್ದಕ್ಕಿಂತಲೂ ಅತೀ ಸುಂದರವಾಗಿ ಕಂಗೊಳಿಸುತ್ತಿತ್ತು. ಕೇವಲ ಎಷ್ಟೋ ಜನರಿಂದ ಕೇಳಿದ್ದರೂ ಪ್ರತ್ಯಕ್ಷವಾಗಿ ಕಾಣುವ ಹಟವಾದಿ ನೋಡ ನೋಡುತ್ತಲೇ ಹೃದಯ ಕರಗಿ ನೀರಾಯಿತ್ತು. ವೀರಶೈವ ಗುರುಗಳ ತಪೋನಿಷ್ಠೆಗೆ ಕಣ್ಣಿಗೆ ಮುಸುಕಿದ್ದ ಅಧಿಕಾರದ ಅಹಂಕಾರ, ದರ್ಪವೆಂಬ ಅಜ್ಞಾನ ಕತ್ತಲೆಯು ದೂರಾಗಿ ಜ್ಞಾನಾಂಜನದಲೇಪದಿಂದ ಕಣ್ಣು ತೆರೆಸಿದ ಶ್ರೀಗಳವರ ಪಾದಕ್ಕೆ ಮಣಿಯ ಬೇಕೆಂಬ ಬಯಕೆ ಚಿಗುರಿತು.

ಜ್ಞಾನ ವೈರಾಗ್ಯಗಳ ಮುಕ್ತ ವಿಚಾರಕ್ಕಾಗಿ ಮನವು ಹಂಬಲಿಸಿತು. ಜಂಜಾಟದ ಸಂಸಾರದಲ್ಲಿ ಜೀವನು ಸಿಲುಕಿ ಜಂಜಡಗೊಂಡಾಗ ಮುಕ್ತಿಗಾಗಿ ಹಂಬಲಿಸುವಂತೆ ಅರಸನು ತನ್ನ ಮನದಾಳದ ಭಾರವನ್ನು ಯಾವ ಬಗೆ ಯಿಂದಲಾದರೂ ಹೊರಗೆ ತಳ್ಳಬೇಕೆಂದು ಕಾರಭಾರಿಗಳನ್ನು ಕರೆದು "ಪೂಜ್ಯರ ದರ್ಶನಕ್ಕೆ ವಿಜಾಪೂರದ ಬಾದಶಹಾನು ಬಂದಿದ್ದಾನೆ ಅವರ ಅಪ್ಪಣೆ ಯಾದರೆ ಮಠದ ಒಳಕ್ಕೆ ಬರುತ್ತಾನೆ." ಎಂದು ಹೇಳಿ ಕಳುಹಿಸಿದನು. ಸೃಷ್ಟಿಕರ್ತನ ಎಂತಹ ವಿಪರ್ಯಾದ ಸನ್ನಿವೇಶ, ಅಂದೊಮ್ಮೆ ಬೇಟೆಗಾಗಿ ಬಂದಾಗ ತಾನು ದೊರೆ ತನ್ನ ಅಧೀನದಲ್ಲಿದ್ದವರ ಏಳ್ಗೆಯನ್ನು ಸಹಿಸದೇ ತಾನು ಮಾಡಿದ್ದೇ ಮಾರ್ಗವೆಂದು ಅಧಿಕಾರದ ದರ್ಪದಲ್ಲಿ ಸಂಪದ್ಭರಿತ ತೋಟದ ಸೌಭಾಗ್ಯವನ್ನೆಲ್ಲ ನಾಶ ಮಾಡಿದ ಅರಸು ಇಂದು ಶ್ರೀಗಳವರ ದರ್ಶನಾ ಕಾಂಕ್ಷಿಯಾಗಿ ಫಲ ಪುಷ್ಪದೊಂದಿಗೆ ಸಕಲ ಸನ್ಮಾನದ ಸಿದ್ಧತೆಯೊಂದಿಗೆ ಅದರಿಂದ ಪ್ರತ್ಯುತ್ತರದ ನಿರೀಕ್ಷೆಗಾಗಿ ಕಾಯುತ್ತಲಿದ್ದಾನೆ. ಇಂಥ ಘಟನೆಗಳು ಅನೇಕ ಶರಣರ ಜೀವನದಲ್ಲಿ ದೈವಿ ಚಮತ್ಕಾರದಂತೆ ನಡೆದು ಹೋಗಿವೆ. ನಡೆಯುತ್ತಲೂ ಇವೆ ಕಾರಭಾರಿಗಳು ಮುಂದಾಗಿ ಬುದ್ಧಿಗಳಿಗೆ ಬಿನ್ನವಿಸಿಕೊಂಡರೂ ಶ್ರೀಗಳ ಶಿಷ್ಯನಾದ ಮರುಳಸಿದ್ದನು ಚಿಂತಾಕ್ರಾಂತನಾಗಿ ಹಿಂದೆ ಮಾಡಿದ ಅನಾಹುತ ದಿಂದ ಮನನೊಂದು ಇಂದು ಮತ್ತಾವ ಕಪಟ ಭಾವನೆಯಿಂದ ಬಂದಿರು ವನೋ? ಯಾವ ಸಮಯದಲ್ಲಿ ಏನು ಮಾಡುವನೋ ಎಂದು ತತ್ತರಿಸಿದನು. ಶ್ರೀಗಳವರು ಬರಲಿಕ್ಕೆ ಅನುಮತಿಯನ್ನು ದಯಪಾಲಿಧರು. ರಾಜನ ಆನಂದಕ್ಕೆ ಮಿತಿಯೇ ಇಲ್ಲ ಭಯ ಭಕ್ತಿಯಿಂದ ಹಣ್ಣು ಹೂ ಕಾಯಿ ಕರ್ಪೂರಗಳನ್ನು ಕಾಡಸಿದ್ಧರ ಪಾದ ಸಮ್ಮುಖದಲ್ಲಿಟ್ಟು ದೀರ್ಘದಂಡ ಪ್ರಣಾಮವನ್ನರ್ಪಿಸಲು ಸಾಷ್ಟಾಂಗ ಹಾಕಿದನು ಆ ಸಮಯದಲ್ಲಿ ಶ್ರೀಗಳವರ ಬಹಿರ್‌ದೃಷ್ಟಿ

CC-0. Jangamwadi Math Collection. Digitized by eGangotri

ಅಂತರ್ಮುಖವಾಗಿತ್ತು. ಶಿಷ್ಯನೇ ಮುಂದಾಗಿ "ಬುದ್ಧಿ ರಾಜನು ಬಂದು
ಸಾಷ್ಟಾಂಗ ಹಾಕಿದ್ದಾರೆ. ಕಣ್ತೆರೆದು ನೋಡಿ ಬುದ್ಧೀ ಅರಸರಿಗೆ ಆಶೀರ್ವಾದ
ಮಾಡಿರಿ ಬುದ್ಧೀ" ಎಂದು ವಿನಂತಿಸಿಕೊಂಡನು. ಕೆಲಹೊತ್ತಿನ ಮೇಲೆ
ಶ್ರೀಗಳವರು ಎಚ್ಚರಗೊಂಡು ನೋಡಿದರು. ಏಸು ಕಾಲದಿಂದ ಹುಟ್ಟಿ
ಸಾಯುತ್ತ ಭವ ಸಾಗರದಲ್ಲಿ ಈಸಿ ಈಸಿ ದಡ ಕಾಣದೇ ಹತಾಶಗೊಳ್ಳು
ಅರಸನ ಅಂತರಂಗದ ಸಂವೇದನೆಯು ಶ್ರೀಗಳು ಕಂಡುಕೊಂಡರು. ಹಸನ್ಮು
ಭಾವದಿಂದ ನಗುತ್ತ "ಎದ್ದೇಳಿ ಅರಸರೇ ಎದ್ದೇಳಿ ! ನಾಡನಾ
ಮುಂದಾಳುಗಳಾದ ತಾವು ಹೆಮ್ಮೆಯಿಂದ ಶರಣರನ್ನು ಸಾಧು ಸಜ್ಜನ ಸ
ರನ್ನು ಇನ್ನೆಂದಿಗೂ ವರೆಗಲ್ಲಿಗೆ ಹಚ್ಚಬೇಡಿ, ಯಾಕೆಂದರೆ ನೋಡಿ; ಯಾ
ಯಾವ ಮಹಾತ್ಮರು ಯೋಗಿಗಳು ಯಾವ ಯಾವ ರೀತಿಯಲ್ಲಿರುತ್ತಾರೆಂಬು
ತಿಳಿಯಲಾರದು," ಎಂದು ಹೇಳುವಷ್ಟರಲ್ಲಿ ಅರಸನು ನಮ್ರತೆಯಿಂದ

"ಅಹುದು ಬುದ್ಧಿ; ನಿಮ್ಮ ಯೋಗ್ಯತೆ ನಾಡಿಗೆ ನಾಡೇ ಹೊಗ
ತ್ತಿದ್ದರೂ ಕೇಳಿ ಕೇಳದವನಂತೆ ತಿಳಿಗೇಡಿತನದಿಂದ ದುಡುಕಿದೆ ಹಿಂದೆ
ಜಹಾಂಗೀರನು ಹಿಂದು ಜನಗಳ ಪವಿತ್ರ ಪೂಜಾ ವೃಕ್ಷವಾದ ಪ್ರಯಾಗದಲ್ಲಿ
ವಟವೃಕ್ಷವನ್ನು ಕತ್ತರಿಸಿ ಮತ್ತೆಂದಿಗೂ ಬೆಳೆಯಬಾರದೆಂದು ಕುದಿಯು
ಸೀಸದ ರಸ ಹಾಕಿ ಮುಚ್ಚಿಬಿಟ್ಟಿದ್ದನಂತೆ ಭಾರತೀಯರ ಸನಾತನ ಧರ್ಮ
ಸಂಸ್ಕೃತಿಗಳು ಎಷ್ಟೊಂದು ಮಹತ್ವವೋ ಹೇಳಲಿಕ್ಕೆ ಬಾರದು. ಬರಬರುತ್ತ
ಅದುಮಿ ಹಿಡಿದಿದ್ದ ಸೀಸದ ದುರ್ಭೇದ್ಯ ಪದರುಗಳನ್ನು ಸೀಳಿ ಆ ವಟ ವೃಕ್ಷ
ಮತ್ತೆ ಹೆಮ್ಮರವಾಗಿ ತಲೆಎತ್ತಿ ನಿಂತಿದೆಯಂತೆ ಆ ಚಾರಿತ್ರ್ಯದ ಪುನರಾವ
ಘನತರವಾದ ನಿಮ್ಮ ಆಚರಣೆಯಿಂದ ನಮಗಿಂದು ಕಂಡುಬಂದಿತು. ವೀರಶೈವ
ಸಿದ್ಧಾಂತಗಳು ಸಾಮಾನ್ಯವಲ್ಲವೆಂದು ನಮಗಿಂದು ಪ್ರತ್ಯಕ್ಷವಾಗಿ ತೋರಿಸಿದಿ
ಎನ್ನಲು ಅಷ್ಟರಲ್ಲಿ ಶ್ರೀಗಳು "ಇದರಲ್ಲಿ ನಮ್ಮದೇನು ಇಲ್ಲ ಅರಸರೇ ಇದೆಲ್ಲ
ಶ್ರೀ ಕಾಡಸಿದ್ಧೇಶ್ವರನ ಲೀಲೆ ಈ ಪವಿತ್ರ ಭೂಮಿಯಲ್ಲಿ ಹುಟ್ಟಿದ ನಾವು ನೀವು
ಸೋದರರು. ಯಾವ ಕಾರಣದಿಂದಲೋ ಯಾವ ಪ್ರಲೋಭದಿಂದಲೋ ನಿಮ್ಮ
ತಾತ ಮುತ್ತಾತರು ಈ ಯೋಗಿ ಭೂಮಿಯ ಮಹತ್ವ ಮರೆತು ಎಲ್ಲಿಂದಲೋ
ಬಂದ ಪರಕೀಯ ಧರ್ಮ ಸ್ವೀಕರಿಸಿ ಭೋಗವಿಲಾಸಗಳಲ್ಲಿ ಬಾಳಿನ ಗುಟ್ಟನ್ನ
ಮರೆಯುತ್ತ ನಡೆದಿದ್ದಾರೆ. ಆದರಿಷ್ಟೇ ನಮ್ಮ ವಂಶಜರಲ್ಲಿ ನಮ್ಮ ಪೀಠಕ್ಕೆ
ಯಾರೇ ಪಟ್ಟಾಧಿಕಾರಿಗಳಾಗಿ ಬಂದರೂ ಅವರ ಯೋಗ್ಯತೆಯನ್ನು ತಿಳಿಯಲು

CC-0. Jangamwadi Math Collection. Digitized by eGangotri

ಒರೆಗಲ್ಲಿಗೆ ಹಚ್ಚಿದರೆ ಪ್ರಾಯಶ್ಚಿತ್ತಪಡದೇ ಗತ್ಯಂತರವಿಲ್ಲ. ಇದು ಆದಿ ಕಾಲದ ಪರಂಪರೆಯಿಂದ ನಡೆದ ಈ ಪೀಠದ ಮಹಾತ್ಮೆ" ಎಂದು ತಿಳಿಸಿದರು.

ಅದಕ್ಕೆ ಸುಲ್ತಾನನು "ಬುದ್ಧೀ ಈ ಶರೀರವು ಎಷ್ಟು ದಿವಸವಿದ್ದರೂ ನಾಶಹೊಂದದೇ ಬಿಡಲಾರದು. ಮುಂದೆ ಹೋಗುವ ಮಾರ್ಗ ಗೊತ್ತಿಲ್ಲದೆ ಹಿಂದೆ ಹಲವು ಜನ್ಮಪಡೆದು ಇಂದು ಸಹ ಗೊತ್ತುಗುರಿಇಲ್ಲದೆ ನಿಮಗೆ ಅನ್ಯಾಯ ಮಾಡಿದ್ದಕ್ಕಾಗಿ ಅಲ್ಲಾನು ನಮಗೆ ಹೊಟ್ಟೆನೋವಿನಂಥ ಕಾಯಿಲೆ ಹಾಕಿದ್ದಾನೆ. ದಯಮಾಡಿ ತಾವು ಕೃಪಾಭಿಕ್ಷೆ ನೀಡಿ ನನ್ನನ್ನು ಈ ರೋಗದಿಂದ ಮುಕ್ತ ಮಾಡಿರಿ. ನಿರ್ಜೀವವಾದ ಈ ಮೃಣ್ಮಯ ಪ್ರಪಂಚಕ್ಕೆ ಚಿನ್ಮಯ ಶಕ್ತಿಯ ಸಿಂಚನದಿಂದ ಸಜೀವಗೊಳಿಸಿ ಸಮೃದ್ಧಿಯ ಚೇತನ ಕೊಟ್ಟ ತಾವು ಸಾಮಾನ್ಯರಲ್ಲ ಎಂದು ದೈನ್ಯೋಕ್ತಿಯಿಂದ ಕೇಳಿಕೊಂಡನು. ಆಗ ಕಾಡಸಿದ್ಧರು, "ನೋಡಿ ಅರಸರೆ ! ಇನ್ನು ನಾಲ್ಕಾರು ತಿಂಗಳಲ್ಲಿ ನಮಗಿಲ್ಲಿಂದ ಬರಬೇಕೆಂದು ಶಿವನ ಅಪ್ಪಣೆಯಾಗಿದೆ ಜೀರ್ಣ ಶರೀರದಿಂದ ಪ್ರಾಣಲಿಂಗವು ಪರಮಾತ್ಮನಲ್ಲಿ ಐಕ್ಯ ಹೊಂದಿದ ಮೂರು ತಿಂಗಳಲ್ಲಿ ನಿಮಗೂ ಶಿವನ ಅಪ್ಪಣೆಯಾಗುತ್ತದೆ. ಅಷ್ಟು ದಿನಗಳ ಪರಿಯಂತ ಒಳ್ಳೆಯ ಕಾರ್ಯಗಳನ್ನು ಮಾಡುತ್ತ ಒಳ್ಳೆಯವರಾಗಿ ಬಾಳಿರಿ. ಮತ್ತೆ ಅಲ್ಲಾನ ರಾಜ್ಯದಲ್ಲಿ ಶಿವನ ಲೋಕದಲ್ಲಿ ನಾವೂ ನೀವೂ ಕೂಡೋಣ" ಎಂದು ಹೇಳಲು ಅರಸನಿಗೆ ಬಹಳ ತಾಪವಾಗಿ ಪರಿಪರಿಯಿಂದ ಬೇಡಿಕೊಂಡನು. ಶ್ರೀಗಳು "ನನ್ನ ಕೈಯಲ್ಲಿ ಏನೂ ಇಲ್ಲ ದೊರೆಗಳೆ, ಎಲ್ಲವೂ ಭಗವಂತನ ಅಪ್ಪಣೆ ನೀವೇನೂ ಚಿಂತಿಸಬೇಡಿ ನಿಮ್ಮ ಹೊಟ್ಟೆನೋವು ಸರಿಯುತ್ತದೆ. ಸಂತೋಷ ಚಿತ್ತರಾಗಿ ಹೋಗಿ ಬನ್ನಿ" ಎಂದು ಅಪ್ಪಣೆಕೊಟ್ಟರು ಅರಸನು ಇದ್ದ ಶೇಷಾಯುಷ್ಯದಲ್ಲಿಯೇ ಶ್ರೀಗಳಿತ್ತ ಅಮೃತೋಕ್ತಿಗಳನ್ನು ಪಾಲಿಸುವ ಭರವಸೆ ಹೊಂದಿ ತಾನು ತಂದಿದ್ದ ಸಕಲ ಕಾಣಿಕೆಗಳನ್ನರ್ಪಿಸಿ ಬಿಜಾಪೂರಕ್ಕೆ ಮರಳಿದನು. ಶ್ರೀಗಳವರ ವಾಕ್ ಸಿದ್ಧಿಯ ಸಾಮರ್ಥ್ಯದಲ್ಲಿ ಎಂಥ ಪ್ರಭಾವವಿತ್ತೋ ಮುಂದೆ ಆರು ತಿಂಗಳಲ್ಲಿ ಶಿವಾಧೀನರಾದರು, ಮತ್ತೆ ಮೂರು ತಿಂಗಳು ಗತಿಸಿಹ ನಂತರ ಬಿಜಾಪೂರದ ಬಾದಶಹನೂ ಮೃತಪಟ್ಟನು ಶಿವಾಚಾರ ತತ್ವನಿಷ್ಟ ಗುರುಗಳ ನಡೆ ನುಡಿಗಳ ಪರಿಶುದ್ಧತೆಗೆ ಕಾಲನೂ ಕೂಡಾ ಕೈಗೊಂಬೆಯಂತಾದುದಕೆ ಇದಕ್ಕಿಂತ ಜೀವಂತ ಜ್ವಲಂತ ಉದಾಹರಣೆಗಳು ಬೇರೆಲ್ಲಿಯೂ ಸಿಗಲಾರವು.

—೦—

CC-0. Jangamwadi Math Collection. Digitized by eGangotri

ಶ್ರೀ ಗುರು ಕೃಪಾ

# ಉತ್ತರಾರ್ಧ

ರಾಷ್ಟ್ರದ ಸರ್ವಾಂಗೀಣ ಪ್ರಗತಿಗೆ ಕೇವಲ ರಾಜಕೀಯ ಕ್ರಾಂತಿಗಳಿಂ ಮಾತ್ರ ಸಾಧ್ಯವಿಲ್ಲ. ಸರ್ವಸಮಾನತೆಯು ಸಾಮಾಜಿಕ ಕಾರ್ಯಗಳಿಂದ ಮಾತ್ರ ಸಾಧ್ಯ. ಅದಕ್ಕಾಗಿಯೇ ಹನ್ನೆರಡನೇಯ ಶತಮಾನದಲ್ಲಿ ಬಸವಣ್ಣನವರು ಅನೇಕ ಬಗೆಯ ನೂತನ ಹಾದಿಯಿಂದ ಸಾಮಾಜಿಕ ಪ್ರಜ್ಞೆಯನ್ನು ಜಾಗೃತಗೊಳಿಸಿದರು. ಕಲುಷಿತ ಸಮಾಜ ಜೀವನವನ್ನು ಹದಗೊಳಿಸಿ ಶಿವಮತ ಬೆಳಕು ಮಾಡಿದರು. ಅಂದು ಕಲ್ಯಾಣದಲ್ಲಿ ಕ್ರಾಂತಿಯಾಗಿ ಎತ್ತೆತ್ತಲೋ ಚದುರಿದ ಶರಣರು ಸತ್ಪುರುಷರು ಹಟಯೋಗದ ದಿಟದ ದೀಕ್ಷೆತೊಟ್ಟು ಅನೇಕ ಪರಿಶ್ರಮಗಳ ಪಟ್ಟ ಫಲದಿಂದಲೇ ಇಂದು ವೀರಶೈವ ಧರ್ಮವು ವಿಶ್ವ ಸಮ್ಮತಿ ಹೊಂದಿ ವಿರಾಜಿಸುವಂತಾಗಿದೆ. ಯಾವದೇ ಧರ್ಮಕ್ಕೆ ಅಸಮಾನತೆಯ ಹುಸಿ ತಳಹದಿಯು ಆಧಾರವಾದರೆ ವಿಶ್ವಮಾನ್ಯವಾಗದೇ ನಾಶಹೊಂದುವದರಲ್ಲಿ ಸಂದೇಹವಿಲ್ಲ. ಕೆಲವೊಂದು ಪಟ್ಟಭದ್ರ ಹಿತಾಶಕ್ತಿಗಳ ಕೈವಾಡದಿಂದ ತಲೆಯನ್ನು ಮೇಲೆತ್ತಲಾರದೆ ಧಾರ್ಮಿಕ ತತ್ವ ಬೋಧೆಗಳಿಗೆಲ್ಲಾ ಸ್ವತಂತ್ರತೆಯು ಸತ್ವವನ್ನಿತ್ತು ವಿರೋಧಮಯ ವಾತಾವರಣದಲ್ಲಿ ಅಧೀರರಾಗದೆ ಸತ್ಯಾಸತ್ಯತೆಗಳ ಪರಾಮರ್ಶಿಸಿ ಮಾರ್ಗದರ್ಶನ ಮಾಡಬಲ್ಲ ಅನೇಕ ನೂತನ ವಿಚಾರವಾದಿಗಳು ಹುಟ್ಟಿದರು. ರಾಜ ಮಹಾರಾಜರ ಕಾಲವಳಿದು ಪ್ರತಿಯೊಂದು ವ್ಯಕ್ತಿಗಳ ಬಹುಮತದಿಂದ ಗೆದ್ದು ಬಂದವರೇ ರಾಷ್ಟ್ರನಾಯಕರಾಗುವ ಪ್ರಜಾಸತ್ತಾತ್ಮಕ ಕಾಲವು ಪ್ರಾರಂಭವಾಗುವ ದಿನವನ್ನೆ ದೇಶ ಕಾಯುತ್ತಲಿತ್ತು. ಸ್ವಾತಂತ್ರ್ಯ ಸಂಘ ಸಂಘರ್ಷಗಳು ಅಲ್ಲಲ್ಲಿ ನಡದೇ ಇದ್ದವು ಅಂಥ ಸಂಕ್ರಾಂತಿಯ ಕಾಲದಲ್ಲೂ ನಮ್ಮ ವೀರಶೈವ ಧಾರ್ಮಿಕ ಪೀಠಾಧಿಕಾರಿಗಳು ದೇಶದ ಸ್ವಾತಂತ್ರ್ಯಕ್ಕಾಗಿ ತಮ್ಮ ತಪೋಶಕ್ತಿಯನ್ನು ಧಾರೆಯೆರೆದು ಪರೋಕ್ಷವಾಗಿ ಅಪರೋಕ್ಷವಾಗಿ ತಮ್ಮ ಸಹಾಯ ಸಹಕಾರಗಳ ಅಮೃತ ಹಸ್ತದ ಶುಭಾಶೀರ್ವಾದ ಮಾಡಿದ ಉದಾಹರಣೆಗಳೂ ಉಂಟು. ಆ ಮಹಾಪುರುಷರು ಇಂದು ನಮ್ಮ ಮಧ್ಯದಲ್ಲಿ ಇಲ್ಲವಾದರೂ ಅವರಿತ್ತ ದಿವ್ಯ ಚೇತನ ಸೂಕ್ಷ್ಮ ಶರೀರವಾಗಿ ರಾಷ್ಟ್ರದ ಭವಿಷ್ಯವನ್ನು ಉಜ್ವಲಗೊಳಿಸುತ್ತಲೇ ನಡೆದಿದೆ. ಅದರಂತೆ ಹಡಗಲಿಯ ಒಂಬತ್ತನೆಯ

CC-0. Jangamwadi Math Collection. Digitized by eGangotri

ಪೀಠಕ್ಕೆ ಕಾಡಸಿದ್ದರೆಂಬವರು ಆಯ್ಕೆಯಾದರು. ಇವರು ಹಡಗಲಿಯ ಹಿರೇಮಠದ ಅಡಿವೆಯ್ಯನವರು ಮತ್ತು ಸಿದ್ಧಲಿಂಗಮ್ಮನೆಂಬ ಆಚಾರ ನಿಷ್ಠ ಸದ್ಧರ್ಮನಿಷ್ಠ ಆದರ್ಶ ದಂಪತಿಗಳ ಮಕ್ಕಳು ಇವರಿಗೆ ಸಂಗಯ್ಯಾ ಮುರಿಗೆಯ್ಯಾ ಹಾಗೂ ಶಿದ್ಧಲೀಗಯ್ಯಾ ಎಂಬ ಹಿರಿಯ ಅಣ್ಣಂದಿರರಿದ್ದರು. ನಮ್ಮ ದೇಶದ ಭಾಷೆಯಲ್ಲಿ ಸಂಸ್ಕೃತಕ್ಕೆ ಅಗ್ರಸ್ಥಾನವಿದೆ. ಅಷ್ಟೇ ಅಲ್ಲ ಸಂಸ್ಕೃತ ಭಾಷೆ ಯೆಂದರೆ ದೇವಭಾಷೆಯೆಂದು ವಿಶ್ವ ಮಾನ್ಯತೆ ಕೂಡಾ ಹೊಂದಿದೆ. ನಾಲ್ಕು ವೇದ ಆರು ಶಾಸ್ತ್ರ ಹದಿನೆಂಟು ಪುರಾಣ ಉಪನಿಷತ್ತು ಇನ್ನೂ ಅನೇಕ ಗ್ರಂಥಗಳು ಸಂಸ್ಕೃತ ಭಾಷೆಯಿಂದ ಇಂದಿಗೂ ಪೂಜ್ಯಗೊಂಡಿವೆ, ಇಂದಿನ ವಿಜ್ಞಾನ ಯುಗದ ಜಗತ್ತು ಕೂಡಾ ಸಂಸ್ಕೃತ ಸನಾತನದ ತತ್ವ ರಹಸ್ಯ ಗಳನ್ನು ಹೊರತೆಗೆಯುತ್ತ ತಲೆದೂಗಹತ್ತಿದೆ. ಸಂಸ್ಕೃತ ಭಾಷೆಯನ್ನು ಕಲಿಯಬೇಕಾದರೆ ಕಾಶೀ ಕ್ಷೇತ್ರವು ಮೂಲ ಕೇದ್ರಸ್ಥಾನವಾಗಿತ್ತು, ಅಲ್ಲಿಂದಲೇ ಕಲಿತವರಿಗೆ ಅಗ್ರಸ್ಥಾನವಿತ್ತು, ಇದನ್ನರಿತ ಸಕ್ಕರಿ ಕರಡೆಪ್ಪನವರು ಬಳ್ಳಾರಿಯಲ್ಲಿ ಬಹು ಪ್ರಯಾಸ ಪಟ್ಟು ಸಂಸ್ಕೃತ ಪಾಠಶಾಲೆಯನ್ನು ಪ್ರಾರಂಭಿಸಿದ್ದರು

ಚಿತ್ತರಗಿಯ ಚಿಜ್ಯೋತಿಯೆಂದು ನಾಡಿನ ಜನಮನವನ್ನು ಬೆಳಗಿದಾ ಶ್ರೀ ವಿಜಯ ಮಹಾಂತಸ್ವಾಮಿಗಳೂ ಹಾಗೂ ಹಡಗಲಿಯ ಅಡಿವೆಯ್ಯನವರೂ ಎಷ್ಟೋ ವರ್ಷಗಳವರೆಗೆ ಸಕ್ಕರಿ ಕರಡೆಪ್ಪನವರ ಸಂಸ್ಕತ ಪಾಠಶಾಲೆಯಲ್ಲಿ ಸಹಪಾಠಿಗಳಾಗಿ ಅಚ್ಚು ಮೆಚ್ಚಿನವರಾಗಿ ಅಭ್ಯಾಸ ಮಾಡಿದವರು ಮಿತಭಾಷಿ ಗಳಾಗಿ ಹಿತಭಾಷಿಗಳಾಗಿ ಜನರ ಪ್ರೀತಿಗೆ ಪಾತ್ರರಾದವರು ಅವಕ್ಕೆಂದೇ ಕೆಲವು ದಿವಸದ ಮೇಲೆ ಚಿತ್ತರಗಿ ಹಾಗೂ ಇಲಕಲ್ಲ ಘನಮಹಿಮೆಯ ನಿರಂಜನ ಚರಪಟ್ಟಾಭಿಷೇಕಕ್ಕೆ ಮಹಾಂತಸ್ವಾಮಿಗಳು ಪಾತ್ರರಾದರು ಅಡಿವೆಯ್ಯನವರು ಹಡಗಲಿಗೆ ಬಂದು ಆಚಾರ್ಯನಿಷ್ಟರಾಗಿ ಧರ್ಮಪತ್ನಿ ಸಿದ್ಧಲಿಂಗಮ್ಮನೊಂದಿಗೆ ದಾಂಪತ್ಯಜೀವನ ಸಾಗಿಸಿದರು, ಮುಂದೆ ನಾಲ್ಕು ಮಕ್ಕಳ ತಂದೆಯೂ ಆದರು ಚಿಕ್ಕವರಾದ ಕಾಡಸಿದ್ಧರನ್ನು ಹಡಗಲಿಯಲ್ಲಿಯ ಪೀಠಕ್ಕೆ ಮಠದ ಅಧಿಕಾರಕ್ಕೆ ಮರಿದೇವರೆಂದು ನೇಮಕ ಮಾಡಿ ವಟುವನ್ನಾಗಿ ಬಿಟ್ಟಿದ್ದರು. ಸ್ವತಃ ಸಂಸ್ಕತ ಭಾಷೆಯಿಂದ ಬಲ್ಲಿದವರಾದ ಅಡಿವೆಯ್ಯನವರು ನಾನಾರೀತಿಯಾಗಿ ಅಭ್ಯಾಸ ಹೇಳಿದರೂ ಶ್ರೀ ಕಾಡಶಿದ್ಧರಿಗೆ ವಿದ್ಯೆಯೇ ಹತ್ತಲಿಲ್ಲ. ಇಪ್ಪತ್ತೈದು ವರುಷದ ವರೆಗೆ ಶ್ರಮಪಟ್ಟರೂ ಬೋರ್ಗಲ್ಲ ಮೇಲೆ ಮಳೆ ಸುರಿವಿದಂತಾಯ್ತು. ಮನನೊಂದುಕೊಂಡು "ಮೂರ್ಖರಿಗೆ ಸಾವಿರಾರು ಸಲ ಮೂರ್ತ ಸ್ವರೂಪ

CC-0. Jangamwadi Math Collection. Digitized by eGangotri

ಕೊಟ್ಟಿದ್ದರ ಸುಂದರವಾದ ಮೂರ್ತಿಯಾದರೂ ಆಗುತ್ತಿತ್ತು" ಎಂದು ಕನವರಿಸಿ ಗೊಳ್ಳುತ್ತಿದ್ದರು. ಆದರೇನು ಮಾಡುವದು, ಜ್ಞಾನ ಪ್ರಸಾರದ ಕಾರ್ಯದಲ್ಲಿ ನಮ್ಮ ನಾಡಿನ ಅನೇಕ ಮಠಮಾನ್ಯಗಳು ಮುಂದುವರಿಯುತ್ತಿದ್ದ ಅಂದಿನ ಸಂದರ್ಭದಲ್ಲಿ ಹಡಗಲಿಯ ಶ್ರೀ ಪೀಠವು ಹಿಂದಕ್ಕೆ ಬಿದ್ದು ಎಲ್ಲಿ ಹೇಳ ಹೆಸರಿಲ್ಲದಂತಾಗುವದೋ ಎಂಬ ಬಲವಾದ ಚಿಂತೆ ಅಡಿವೆಯ್ಯನವರನ್ನು ಭಾದಿಸ ಹತ್ತಿತು. ಯಾವದಾದರೂ ವೈಶಿಷ್ಟ್ಯವಿರದೇ ಹೋದರೆ ಯಾವ ಮಠ ಮಾನ್ಯ ಗಳಿಗೂ ಪ್ರಾಧಾನ್ಯತೆ ಸಿಗದು. ಎಲ್ಲದಕ್ಕೂ ಶಿವನ ಮೇಲೆ ಭಾರ ಹಾಕಿ ಕರ್ತವ್ಯ ಚ್ಯುತರಾಗದೇ ಎಲ್ಲಾ ಭಕ್ತ ಮಂಡಳಿಯನ್ನು ಕೂಡಿಕೊಂಡು ಚಿತ್ತರಗಿಯ ಹಿರೇಮಠದ ಪಟ್ಟಾಧಿಕಾರಿಗಳಿಂದ ಮುಳಗಾಂವಿಯ ಪಟ್ಟಾಧಿಕಾರಿಗಳ ನೇತೃತ್ವ ದಲ್ಲಿ ಒಳ್ಳೆಯ ಮುಹೂರ್ತದಲ್ಲಿ ಪಟ್ಟಾಧಿಕಾರದ ಸಮಾರಂಭವನ್ನು ನೆರವೇರಿಸಿ ಕಾಡಸಿದ್ಧರಿಗೆ ಹಡಗಲಿ ಪೀಠಾಧಿಕಾರವನ್ನು ವಹಿಸಿಕೊಟ್ಟರು. ಪೀಠದ ಪರಂಪರಾಗತ ಮಹಾತ್ಮರ ಸ್ಪರ್ಶದಿಂದ ಎಂಥ ಹುಚ್ಚರಿದ್ದರೂ ಜಗದ ಹುಚ್ಚನ್ನು ಬಿಡಿಸುವ ಸಾಮರ್ಥ್ಯ ಹೊಂದುತ್ತಾರೆ. ತಿಳುವಿಲ್ಲದವರಂತೆ ತೋರಿದರೂ ತಿಳಿದುಕೊಳ್ಳಬೇಕೆಂಬ ಹವ್ಯಾಸ ತಿಲಮಾತ್ರವಿಲ್ಲದೇ ಸ್ವಯಂಸಿದ್ಧ ಶಕ್ತಿಯಾಗಿ ತುಂಬಿದಕೊಡದಂತೆ ಇರುತ್ತಾರೆನ್ನುವದಕ್ಕೆ ಕಾಡಶಿದ್ಧ ಶ್ರೀಗಳಜೀವನ ವೃತ್ತಾಂತವನ್ನು ಕಂಡವರು ಕೇಳಿದವರು ಮನಸಾರೆ ಹೊಗಳಿದ್ದಾರೆ. ತಮ್ಮ ಭಕ್ತಿಯ ಸೇವೆಯನ್ನರ್ಪಿಸಿ ಪುನೀತರಾಗಿದ್ದಾರೆ. ಪುಸ್ತಕ ಪಾಂಡಿತ್ಯದ ವಿದ್ಯೆಗಿಂತ ತನ್ನ ತಾನರಿವ ಮಸ್ತಕವಿದ್ಯೆಯು ಮೇಲು, ಒಂದೊಮ್ಮೆ ಸಿದ್ಧಾಸನದಿ ಕುಳ್ಳಿರಿಸಿ ಆಧ್ಯಾತ್ಮದೊಳಗಿನ ಶುದ್ಧನಿರ್ಮಲ ತತ್ವದ ಮೋಕ್ಷರಕ್ಷರದ ಅಕ್ಷರವತಿಳಿಸಿ ಲಕ್ಷ ಸಾಧನದಿಂದ ನೀಂ ಸಾಧಿಸೆಂದು ಹೇಳಿದ ಸದ್ಗುರುವಿನ ಆಜ್ಞೆಗಿಂತ ಭಿಕ್ಷ ವಿದ್ಯೆ ಕಲಿಯುವದು ನಿರರ್ಥಕವೆಂದು ತಿಳಿದಿದ್ದ ಶ್ರೀಗಳು ಅನುಷ್ಠಾನ ಕ್ರಿಯೆಯನ್ನೇ ಬೆಳೆಸಿಕೊಂಡರು. ತ್ರಿಕಾಲದಲ್ಲಿಯೂ ಲಿಂಗಪೂಜೆ ಮಾಡುತ್ತ ಚಿತ್ತವನ್ನು ಅತ್ತಿತ್ತ ಚಲಿಸದೆ ಶಿವಾನುಭವದ ಸಂತೃಪ್ತಿಯಲ್ಲಿ ಸದಾ ತನ್ಮಯರಾಗುತ್ತಿದ್ದರು ಯೋಗದ ಆಳನ್ನು ಯೋಗಿಗಳೇ ಬಲ್ಲರು.

ನಮ್ಮ ಶಿವಯೋಗಿ ಕಾಡಸಿದ್ಧರ ಪರಮ ವೈರಾಗ್ಯದ ಯೋಗ ನಿಷ್ಠೆ ಸಾಮಾನ್ಯರಿಗೆ ಅರ್ಥವಾಗಲಾರದು, ಪ್ರಕೃತಿ ಶ್ರೀ ಆತ್ಮಶ್ರೀ ಮತ್ತೆ ಲೋಕಶ್ರೀ ಗಳೆಂಬ ತ್ರಿವೇಣಿ ಸಂಗಮದಲ್ಲಿ ತಮ್ಮ ಜೀವನ ಶ್ರೀಯನ್ನು ಬೆಳಗಿಸುತ್ತ ಕೇವಲ ಬಾಯ್ಮಾತಿನ ಬ್ರಹ್ಮಿಗಳಾಗದೆ ಷಟುಸ್ಥಲ ಬ್ರಹ್ಮಿಗಳಾಗಿ ಅಷ್ಟಾವರ್ಣ

CC-0. Jangamwadi Math Collection. Digitized by eGangotri

ದಾಚಾರಗಳಲ್ಲೂ ಶ್ರೇಷ್ಠರಾಗುತ್ತ ನಡೆದರು. ಪ್ರತಿಯೊಬ್ಬ ಮಾನವನಲ್ಲಿದ್ದ ಅವ್ಯಕ್ತ ಸ್ವರೂಪದ ಅಂತರಾತ್ಮನನ್ನು ಜಾಗೃತಗೊಳಿಸುವದೇ ಜ್ಞಾನಿಗಳ ಕರ್ತವ್ಯ ಅವನತಿ ಹೊಂದಲಿರುವ ಜನಾಂಗಕ್ಕೆ ತಮ್ಮ ನಡೆ ನುಡಿಗಳ ಶೀಲತನದಿಂದ ಭಗವಂತನ ಲೀಲಾಮೃತವನ್ನು ತಿಳಿಯಪಡಿಸಿ ಉನ್ನತ ಮಾರ್ಗಕ್ಕೆ ಹಚ್ಚುವದೇ ಪರಮವಿರಕ್ತರ ಹೊಣೆ. ಅದರಂತೆ ಶ್ರೀಗಳವರ ಧರ್ಮಶೀಲ, ಆಚಾರ್ಯಶೀಲ ವೈರಾಗ್ಯಶೀಲ ಬದುಕಿನಿಂದ ಮಠದ ಅಸ್ತಿತ್ವಕ್ಕೆ ಅನೇಕ ರೀತಿಯಿಂದ ಮಾನ್ಯತೆಯ ಮೆರಗು ದೊರೆತು ಜನರ ಪ್ರೀತಿ ಆದರಗಳಿಗೆ ಕಾಡಸಿದ್ದರು ಬಹುಬೇಗ ಪಾತ್ರರಾದರು. ಹಗಲು ರಾತ್ರಿಗಳು ಸೃಷ್ಟಿಯ ನಿಯಮವಲ್ಲವೆ ? ಸಮುದ್ರಕ್ಕೆ ಏರಿಳಿತಗಳಿಲ್ಲವೆ ? ಚಂದ್ರನಿಗೆ ಕ್ಷಯ ವೃದ್ಧಿಗಳಿಲ್ಲವೆ ? ಸತ್ವಪರೀಕ್ಷೆಗೆಂದೋ ಅಥವಾ ಮುಂದಣ ಭವಿಷತ್ತ್ ಭಾಗ್ಯದಲ್ಲಿ ಪೀಠದ ಉಜ್ವಲ ಭವಿಷ್ಯದ ಮುಂಗುರುತಿಗಾಗಿಯೇ ಸಂಕಟದ ಸುಂಟರಗಾಳಿ ಪೂಜ್ಯ ಹಡಗಲಿಯ ಮಠದ ಪೀಠಕ್ಕೆ ಬೀಸಿತು. ಮಠದ ಏಳ್ಗೆಯನ್ನು ಸಹಿಸದ ಅಸೂಯಾಪರರು ದ್ವೇಷದ ಬೀಜ ಬಿತ್ತುತ್ತನಡೆದರು. ಮದೋನ್ಮತ್ತ ಸ್ವಾರ್ಥಿ ಗುಂಡಾಗಿರಿಯ ಕೆಲವೊಂದು ಪುಂಡರು ಮಠದ ಆಸ್ತಿಯನ್ನು ಸ್ವಾಧೀನ ಮಾಡಿಕೊಳ್ಳುವ ಸಂಚು ಹೂಡಿದರು. ಕ್ಷುಲ್ಲಕ ಕಾರಣಗಳಿಂದ ಶ್ರೀಗಳವರಿಗೆ ಕಿರುಕಳ ಕೊಡುತ್ತ ಮಠದ ಬಗ್ಗೆ ವ್ಯಾಜ್ಯ ನಡೆಸಿದರು. ವಿಪರೀತ ಬುದ್ಧಿಗಳ ವಿನಾಶ ಕೆಲಸಗಳು ಎಂಥ ವಿವೇಕಿಗಳನ್ನು ಕೂಡಾ ತಳಮಳಿಸಹಚ್ಚುತ್ತವೆ. ಮದವೇರಿದ ದುರ್ಮಾರ್ಗಿಗಳಿಗೆ ಮಹಾತ್ಮರ ಅಂತರಂಗದ ನೋವು ಅರಿವಾಗಬಲ್ಲುದೆ ? ಅವರವರ ಮೈಸೊಕ್ಕು ಅವರವರ ಮೈ ನೆಕ್ಕದೆ ಬಿಡುವದುಂಟೆ ? ಶ್ರೀಗಳವರು ಮನನೊಂದು ಇದೆಲ್ಲವೂ ಕಾಡಸಿದ್ಧನ ಲೀಲೆಯೆಂದರಿತು ಮಠದ ಬಗ್ಗೆ ನ್ಯಾಯ ಹುಟ್ಟಿರುವಾಗ ನಮ್ಮ ದಿನನಿತ್ಯದ ಅನುಷ್ಠಾನ ಕ್ರಿಯೆಗೆ ಭಂಗತಪ್ಪಿದ್ದಲ್ಲವೆಂದು ತಿಳಿದು "ನಮಗೆ ಮಠಗಳೇ ಬೇಡಾ" ಎಂದು ಹಡಗಲಿಯನ್ನು ಬಿಟ್ಟು ಮುಗಳ್ಳಿಗೆ ಬಂದರು ಅಲ್ಲಿ ಅರಕೇರಿಯರೆಂಬ ಮನೆತನದವರು ಮೊದಲಿನ ಕಾಡಸಿದ್ಧೇಶ್ವರರಿಗೆ ಒಂದು ಮನೆಯನ್ನು ಕಟ್ಟಿಸಿ ಕೊಟ್ಟಿದ್ದರು. ಅದನ್ನು ಶಾಖಾ ಮಠವೆಂದು ಪರಿವರ್ತನ ಮಾಡಿದ್ದರು. ಶ್ರೀಗಳು ಬಂದ ವಾರ್ತೆ ತಿಳಿದೊಡನೆ ಭಕ್ತರು ಅವರನ್ನು ಆದರದಿಂದ ಬರ ಮಾಡಿಕೊಂಡು ಅಲ್ಲಿ ಇರಲಿಕ್ಕೆ ಸಕಲ ರೀತಿಯಿಂದ ಅನುಕೂಲಮಾಡಿಕೊಟ್ಟರು. ನಾಲ್ಕಾರು ತಿಂಗಳ ಶಿವಪೂಜಾ ನಿಷ್ಠರಾಗಿ ಷಟ್ಸ್ಥಲದಾಚರಣೆಯನ್ನು ಮನಮುಟ್ಟಿ ಆಚರಿಸುತ್ತ ಕಾಲ ಕಳೆದರು. ಇಷ್ಟಾದರೂ ಹಡಗಲಿ ಗ್ರಾಮಂದ

CC-0. Jangamwadi Math Collection. Digitized by eGangotri

ಕುಹಕಿಗಳ ತಲೆಗೇರಿದ ಪಿತ್ತವಿನ್ನೂ ದಮನವಾಗಿರಲಿಲ್ಲ. ಬಿಸಿ ತಟ್ಟದೆ ಬೆಣ್ಣೆ ಕರಗಲಾರದು, ನಿಂದಕರು ನೆರೆಯುಲಿದ್ದರಲ್ಲವೇ ಸಜ್ಜನರ ಪ್ರಭಾವವೆದ್ದು ಕಾಣುವದು. ಅಸುಯಾಪರರು ಹೆರವರ ಸಂಪತ್ತಿಗೆ ಹೊಟ್ಟೆಕಿಚ್ಚು ಪಡುವವರು ಸ್ವಾಮಿಗಳಿದ್ದರೇನು ? ಕಾಮಿಗಳಿದ್ದರೇನು ? ಕಾಡುವದೊಂದೇ ಅವರ ನೇಮ ಇಂಥವರನ್ನೆಲ್ಲ ಎದುರಿಸುವ ಎದೆಗಾರಿಕೆ ಧೈರ್ಯ-ಸ್ಥೈರ್ಯಗಳು ಇದ್ದರೂ ಹಿಂಸಾರೂಪಕ್ಕಿಳಿಯಬಾರದೆಂದೇ ಶ್ರೀಗಳವರ ಇಚ್ಚೆ. "ಜಗತ್ತೇ ದೇವ ನ್ಯಾಯಾಲಯ ಆತನ ತೀರ್ಪೇ ನ್ಯಾಯಾಧೀಶನ ತೀರ್ಪೆಂದು" ಕೇಡು ಬಗೆದ ಖೋಡಿ ಜನರನ್ನು ಕೂಡಾ ಆತ್ಮೀಯ ಅಂತಃಕರಣದಿಂದ ಕಾಣುತ್ತಿದ್ದರು. ಆದರೂ ಶ್ರೀಗಳವರ ಅಣ್ಣಂದಿರಾದ ಸಂಗಯ್ಯನವರು, ಮುರಿಗೆಯ್ಯನವರು ಮುಗಳಳ್ಳಿಗೆ ಬಂದು ದಿನಾಲು ಕಾಡುತ್ತಿದ್ದರು. "ಮಠದ ನ್ಯಾಯ ಉಗ್ರಸ್ವರೂಪ ತಾಳಿದೆ. ನೀವು ಇಲ್ಲಿ ಕುಳಿತರೆ ನಾವು ಯಾರನ್ನು ಕಟ್ಟಿಕೊಂಡು ನ್ಯಾಯ ಮಾಡಬೇಕು ದುರಭಿಮಾನಿಗಳು ನಮ್ಮ ಪೀಠದ ಸ್ವಾಭಿಮಾನವನ್ನು ಕೆಣಕುತ್ತ ನಡೆದಿದ್ದಾರೆ, ಬರ್ರಿ ಹೋಗೋಣ" ವೆಂದು ಪೀಡಿಸಹತ್ತಿದರು. ಅದಕ್ಕೆ ಶ್ರೀಗಳು "ನೋಡಿ ನನಗೆ ಮಠಾ ಬೇಡಾ, ಮಠದ ಆಸ್ತಿ-ಪಾಸ್ತಿ ಏನೊಂದೂ ಬೇಡ. ಜಗದ ಗಲಬಿಲಿ ತಟ್ಟದೆ, ವಿಷಯ ವಾಸನೆ ಮುಟ್ಟದೆ, ಶಿವ ತತ್ವದ ಹಾಡಿನಲ್ಲಿ ತಾನೆ ತಾನಾಗಿ ಉಲಿಯುವ ಬಹು ದೂರದ ಏಕಾಂತ ಸ್ಥಳಕ್ಕೆ ಹೋಗಬೇಕೆಂದು ನಮ್ಮ ಬಯಕೆಇದೆ. ನೀವೇ ಎಲ್ಲಾ ಏನಾದರೂ ಮಾಡಿಕೊಳ್ಳಿ ಎಂದು ಹೇಳಿದರು, ಎಷ್ಟು ಹೇಳಿದರೂ ಮೇಲಿಂದಮೇಲೆ ಕಷ್ಟ ಕೊಡ ಹತ್ತಿದರು. ಇನ್ನು ಸಮೀಪದಲ್ಲಿ ಇರಬಾರದೆಂದು ಸಂಚಾರ ಮಾಡುತ್ತ ಬಾಗಲಕೋಟೆಗೆ ದಯಮಾಡಿಸಿದರು. ಕೆಲವು ದಿವಸ

ಮನೆಯಲ್ಲಿ ಶಿವಪೂಜಾ ಮುಗಿಸಿಕೊಂಡು ನಗರ ಜೀವನದಲ್ಲಿ ಸಂತೃಪ್ತಿಯನ್ನು ಪಡೆಯದೆ ಶ್ರೀಗಳವರ ಅಂತರಾಳವು ಏನನ್ನೊ ಅರಸು ಮಂತಿತ್ತು ಯಾವ ದಿಕ್ಕಿನಿಂದಲೋ ಜ್ಞಾನಗಂಗೆಯ ಸಿಂಚನದಿಂದ ಸುವಾಸನೆಯ ಸೌರಭದಿಂದ ವೈರಾಗ್ಯ ಪೀಠದ ವೈಭವವನ್ನು ಗಾಳಿಯಲ್ಲಿ ಮೈಗೂಡಿಸಿ ಶ್ರೀಗಳವರನ್ನು "ಬಾ ಬಾ" ಎಂದು ಕರೆಯುವಂತೆ ಅನಿಸಿತು. ಆ ಅನಿರ್ವಚನೀಯ ಕೂಗನ್ನರಸುತ್ತ ನಡದೇ ಬಿಟ್ಟರು. ಆ ಕೂಗು ಕೋಟೆಕಲ್ಲ ಶ್ರೀ ಹುಚ್ಚೇಶ್ವರ ಮಠದ ಪಾಠಶಾಲೆಲ್ಲಿಯ ಅಭ್ಯಾಸಿಗಳ ವೇದಾಧ್ಯಯನದ ಕೂಗು ಸಂಸ್ಕೃತ ಭಾಷೆಯಲ್ಲಿರ್ದ ಅನೇಕ ಗೂಢವಿಚಾರಗಳ ಮಂಥನಮಾಡುವ ಕೂಗು, ಜ್ಞಾನ

CC-0. Jangamwadi Math Collection. Digitized by eGangotri

ಪ್ರಸಾರ ಕಾರ್ಯದಲ್ಲಿ ಸಂಸ್ಕೃತ ಪಾಠಶಾಲೆಯನ್ನಿಟ್ಟು ಗುಳೇದಗುಡ್ಡ ಹಾಗೂ ಕೋಟೆಕಲ್ಲ ಭಕ್ತರ ಮನದಲ್ಲಿ ಚಿರಂತನದ ನೆನಹು ಆಗಿದ್ದ ಪರಮ ವೈರಾಗ್ಯಶೀಲ ತಪೋನಿಷ್ಠ ಶ್ರೀ ಹುಚ್ಚೇಶ್ವರ ಮಹಾಸ್ವಾಮಿಗಳ ಕೂಗು ಸಂಚಾರ ಮಾಡುತ್ತ ಕೋಟೆಗಲ್ಲಿಗೆ ಬಂದೇ ಬಿಟ್ಟರು.

ಹುಚ್ಚೇಶ್ವರ ಶ್ರೀಗಳು ಆದರದಿಂದ ಬರಮಾಡಿಕೊಂಡು ಆಶ್ರಯ ಕೊಟ್ಟರು. ಗುರು ವಿರಕ್ತರಲ್ಲಿ ಭೇಧ-ಭಾವನೆ ಬಾರದಂತೆ ಶಿವಪೂಜೆ ಲಿಂಗಾನುಷ್ಠಾನಕ್ಕೆ ಎಲ್ಲ ರೀತಿಯಿಂದಲೂ ಅನುವು ಮಾಡಿಕೊಟ್ಟರು. ಅಂದಿನ ವಾತಾವರಣದಲ್ಲಿ ಕಾಡಸಿದ್ಧ ಶ್ರೀಗಳ ಆತ್ಮಶಕ್ತಿ ಪುಟಕ್ಕಿಟ್ಟ ಚಿನ್ನದಂತಾಗಿ ದಿನದಿಂದ ದಿನಕ್ಕೆ ಪ್ರಕಾಶಮಾನವಾಗಹತ್ತಿತು.

ಸುಖದ ಬೆನ್ನು ಹತ್ತಿದವರು ಸ್ವಾವಲಂಬಿಗಳಾಗದೇ ಪರಾವಲಂಬಿಗಳಾಗಿ ಪರಧರ್ಮಗಳನು ಸ್ವೀಕಾರ ಮಾಡುತ್ತ ಬಂದಿರುವದು ಭಾರತೀಯರ ದುರ್ದೈವ. ದೇವರೊಬ್ಬನೇ ಎಂಬ ಮೂಲ ತಿಳುವಳಿಕೆ ಮರೆತು ಹರಕೆಗಳು ಕೈಗೂಡದಾಗ ಬೇರೆ ಬೇರೆ ದೇವರಿಗೆ ಕೈ ಮುಗಿಯಲು ಸಹ ನಾವು ಸಿದ್ಧರು. ವಿಜ್ಞಾನವು ಎಲ್ಲ ಕ್ಷೇತ್ರಗಳಲ್ಲಿ ಹರಡಿ ಜಗತ್ತಿನ ಮಾನವ ಕ್ಷಣ ಕ್ಷಣಕ್ಕೂ ಮುಂದುವರೆಯುತ್ತಿರುವಾಗ ನಾವು ಮಾತ್ರ ತಲೆತಲಾಂತರದಿಂದ ಬಂದ ಹಳೆಯ ಕಂದಾಚಾರಗಳನ್ನು ಮರೆತಿಲ್ಲ. ಕುರುಡು ನಂಬಿಕೆಗಳಿಂದ ಮುಕ್ತರಾಗಿಲ್ಲ. ಸುಖ ಸಂಪತ್ತು ನಮಗೆ ಕ್ರಿಸ್ತರಿಂದ ಬರಲಿ ಅಥವಾ ಮುಸಲ್ಮಾನರಿಂದ ಬರಲಿ ಇನ್ನು ಯಾರಿಂದಲಾದರೂ ಯಾವರೀತಿಯಿಂದಲಾದರೂ ಬರಲಿ ಅದನ್ನು ಸ್ವಾಹಾ ಮಾಡುವದಕ್ಕಾಗಿ ಮಾನವೀತೆಯ ಮೌಲ್ಯಗಳನ್ನು ಕಳೆದುಕೊಂಡು ಆಲಸಿಗಳಾಗಿ, ಸೋಮಾರಿಗಳಾಗಿ ಅಲ್ಲಿಗೆ ಧಾವಿಸುತ್ತೇವೆ. ಅಂಧಃ ಶ್ರದ್ಧೆಯ ಕವಚದಿಂದ ಬಿಗಿಯಲ್ಪಟ್ಟ ನಾವು ಹಳೆಯ ಸಂಪ್ರದಾಯಗಳನ್ನು ಇಂದು ದೂರ ಮಾಡಲೂ ಸಿದ್ಧರಿಲ್ಲ. ಮುಕ್ತ ಮನಸ್ಸಿನಿಂದ ಸ್ವೀಕರಿಸಲು ಒಪ್ಪುವದಿಲ್ಲ "ಹರನೆಂಬುದೆ ಸತ್ಯ, ಸತ್ಯವೆಂಬುದೆ ಹರ" ನೆಂದು ಸತ್ಯವಂತನಾಗಿ ಬಾಳಿದ ಹರಿಶ್ಚಂದ್ರನಂತೆ ಎಲ್ಲರೂ ಸತ್ಯವಂತರಾಗಿ ಬದುಕುವದು ಸುಲಭವಲ್ಲ. ಇಂಥ ಒಂದು ಸಂದಿಗ್ಧ ಪರಿಸ್ಥಿತಿಯ ನೂತನ ವಾತಾವರಣದಲ್ಲಿ ಭಿಕ್ಷುಕ ವೃತ್ತಿಯ ಧಾರ್ಮಿಕ ನೇತಾರರಿಂದ ಸಮಾಜ ಪ್ರಗತಿಹೊಂದಬಹುದೆ ? ದೇಶ ಮುಂದುವರಿಯಬಹುದೆ ?. ಇಲ್ಲ! ಧರ್ಮವು ಭಿಕ್ಷುಕ ವೃತ್ತಿಯು ಹೇಡಿತನವಲ್ಲ ಆತ್ಮಚಕ್ಷುವನ್ನು ತೋರಿಸಬಲ್ಲ

CC-0. Jangamwadi Math Collection. Digitized by eGangotri

ವೀರತನದ್ದಿದೆ. ಸಮಾಜದ ಪ್ರಗತಿಗೆ ದೇಶದ ಭದ್ರತೆಗೆ ಧರ್ಮವು ಬೇಕೇ ಬೇಕು. ಧರ್ಮದ ಹೆಸರಿನಿಂದ ದ್ರೋಹ ಮಾಡುವ ಅನೇಕ ಪಟ್ಟಭದ್ರ ಧಾರ್ಮಿಕ ಮುಂದಾಳುಗಳಿಂದ ಡಾಂಭಿಕ ವೃತ್ತಿಯ ವಂಚಕರಿಂದ ಸಮಾಜ ಸಮೃದ್ಧಿ ಹೊಂದದು, ದೇಶ ಸಮರ್ಥವಾಗದು ಬೇಲಿಯೇ ಎದ್ದು ಹೊಲ ಮೇದರೆ ಒಕ್ಕಲಿಗನ ಗತಿ ಏನು ? ಎದೆ ಹಾಲು ಕುಡಿಸುವ ತಾಯಿ ಪೂತನಿ ಯಾದರೆ ಮಗುವಿನ ಗತಿ ಏನು ? ಜೀವರಾಶಿಗಳಿಗೆಲ್ಲ ಬಾಳಿಬದುಕಲು ಆಶ್ರಯದ ಸ್ಥಾನವಾದ ಭೂದೇವಿಯೇ ಮುನಿದರೆ ಜೀವಿಗಳ ಗತಿ ಏನು ? ಇಲ್ಲ ! ಹಾಗೆಂದಿಗೂ ಆಗಲಾರದು, ಆಗಕೂಡದು. ಅದಕ್ಕೆಂದೇ ದೇವರು ಕಾಲ ಕಾಲಕ್ಕೆ ಕ್ರಾಂತಿಕಾರಕ ಹೋರಾಟ ಜೀವನದಲ್ಲೂ ಬದುಕಿನ ಸಫಲತೆಯ ಸಂದೇಶಗಳನ್ನು ಸಾರುವದಕ್ಕಾಗಿ ಶರಣ ಶರಣೆಯರಿಗೆ ಜನ್ಮಕೊಟ್ಟಿದ್ದಾನೆ. ನಮ್ಮ ಕಾಡಸಿದ್ಧ ಶ್ರೀಗಳಂಥ, ಶ್ರೀ ಹುಚ್ಚೇಶ್ವರರಂಥ ಪಂಚ ಪುರುಷಗಳನ್ನು ಸ್ವಾಧೀನದಲ್ಲಿರಿಸಿಕೊಂಡ ತಪಸ್ವಿಗಳಿಗೆ, ಶಿವಾನುಭವಿಗಳಿಗೆ, ಅನೇಕ ಲೀಲೆ ಗಳನ್ನು ತೋರಿಸುತ್ತ ತನ್ನ ವಿಶ್ವದರ್ಶನವಿನ್ನಿತ್ತಿದ್ದಾನೆ. ನಮಗಿಂದು ಜ್ಞಾನದ ಹಸಿವಾಗಬೇಕು. ಅನುಭವ ತತ್ವಗಳ ಸತ್ವಯುತ ಆಹಾರದಿಂದ ನಾವು ಎಂಥ ಸಂಕಟಗಳನ್ನಾದರೂ ಬಗ್ಗಿಸಲು ಸಿದ್ಧರೆಂಬ ಪ್ರಬುದ್ಧ ಶಕ್ತಿ ಯನ್ನು ಬೆಳೆಸಿಕೊಳ್ಳಬೇಕು. ಆ ದಿಶೆಯಲ್ಲಿ ನಾವು ಸೋಮಾರಿತನಕ್ಕೆ ಳಿಯದೇ ಕರ್ತವ್ಯದ ಪಾಲನೆ ಮಾಡೋಣ ಅನುಭಾವಿಗಳ ಸಂದರ್ಶನಕ್ಕೆ ವೈರಾಗ್ಯಶೀಲರ ಸಿದ್ಧ ಹಸ್ತದ ಶುಭಾಶೀರ್ವಾದಕ್ಕೆ ಗ ಳೇದಗುಡ್ಡದ ಸದ್ಭಕ್ತರು ಅವರೆಲ್ಲಿದ್ದರೂ ಧಾವಿಸಿ ಬರುವದು ಅವರ ಹುಟ್ಟುಗುಣ ಅದಕ್ಕೆಂದೇ ಶಿವಶರಣೆ ಅಕ್ಕ ಮಹಾದೇವಿ ಈ ರೀತಿ ಹೇಳಿದ್ದಂತು "ಸಂಗದಿಂದಲ್ಲದೇ ಅಗ್ನಿ ಹುಟ್ಟದು, ಸಂಗದಿಂದಲ್ಲದೇ ಬೀಜ ಮೊಳೆದೋರದು, ಸಂಗದಿಂದಲ್ಲದೆ ದೇಹವಾಗದು. ಸಂಗದಿಂದಲ್ಲದೆ ಸರ್ವಸುಖ ತೋರದು ಚನ್ನಮಲ್ಲಿ ಕಾರ್ಜುನಯ್ಯಾ ನಿಮ್ಮ ಶರಣರ ಅನುಭಾವದ ಸಂಗದಿಂದ ನಾನು ಪರಮ ಸುಖಿಯಾಗಿ ಬದುಕಿದೆನಯ್ಯಾ ಪ್ರಭುವೆ" ಇನ್ನೊಂದು ವಚನದಲ್ಲಿ "ತನು ಶುದ್ಧವಾಯಿತ್ತು ಶಿವಭಕ್ತರೊಕ್ಕುದ ಕೊಂಡು ಎನ್ನ ಮನ ಶುದ್ಧವಾಯಿತ್ತು ಅಸಂಖ್ಯಾತರ ನೆನೆದು, ಎನ್ನ ಕಂಗಳ ಶುದ್ಧವಾಯಿತ್ತು ಸಕಲ ಪುರಾತನರ ನೋಡಿ, ಎನ್ನ ಶ್ರೋತ್ರ ಶುದ್ಧವಾಯಿತ್ತು ಅವರ ಕೀರ್ತಿಯ ಕೇಳಿ ಎನ್ನ ಭಾವನೆಯನಗಿದು ಜೀವನವು ಕೇಳಾ ಲಿಂಗ ತಂದೆ ನೆಟ್ಟನೆ ನಿಮ್ಮವ ಪೂಜಿಸಿ

CC-0. Jangamwadi Math Collection. Digitized by eGangotri

ಭವಗೆಟ್ಟೆ ಕಾಣಾ ಚನ್ನಮಲ್ಲಿಕಾರ್ಜುನಾ" ಹೀಗೆ ಅನೇಕ ಸುಲಲಿತ ಭಾಷೆಯ ವಚನಗಳಿಂದ ಕನ್ನಡ ಸಾಹಿತ್ಯ ಶ್ರೀಗೆ ಧವಲ ಕೀರ್ತಿಯ ಮೆರಗು ಕೊಟ್ಟ ಅಕ್ಕಮಹಾದೇವಿ ಹೆಣ್ಣುಮಗಳಾದರೂ ಆಮ್ಮತನ ಮರತು ಅಂಧಕಾರದ ಅಡ್ಡದಾರಿ ಹಿಡಿದ ಜನ ಜಗತ್ತಿಗೆ ಕಣ್ಣು ಕೊಟ್ಟ ಮಹಾ ಮಹಿಮಾನ್ವಿತೆ. ಬಾಳಿನಲ್ಲಿ ಬೆಳಕು ತೋರಿಸಿದ ಮಹಾ ಶಿವಶರಣೆ, ಇಂಥ ಶಿವಶರಣೆಯರ, ಮಹಾ ಶಿವಶರಣರ ಪುರಾಣ ಪುಣ್ಯಕಥೆ ಶಾಸ್ತ್ರಾರ್ಥಗಳ ಸಹಜ ಚರ್ಚೆ ವೇದಾಂತ ಶ್ರವಣ, ದಿನಾಲು ಕೋಟಿಕಲ್ಲ ಶ್ರೀ ಹುಚ್ಚೇಶ್ವರ ಮಠದಲ್ಲಿ ಶ್ರೀಗಳವರ ನೇತೃತ್ವದಲ್ಲಿ ಶಿವಾನುಭವ ಗೋಷ್ಠಿ ನಡೆಯುತ್ತಿದ್ದವು. ಅದ್ಕರ ಇತಿಹಾಸಪುರಾಣ ಪುಣ್ಯಕಥೆಗಳು ನಮ್ಮ ಬಾಳನ್ನು ತಿದ್ದಿ ಶುದ್ಧಾತ್ಮರನ್ನಾಗಿ ಮಾಡುವ ಪವಿತ್ರ ಸಾಧನಗಳು ಆದಕ್ಕೆಂದೇ ಮಾನವ ಜನ್ಮದ ಸಫಲತೆಗಾಗಿ ಗುಳೇದಗುಡ್ಡದ ಸದ್ಭಕ್ತರು ಶ್ರೀ ಹುಚ್ಚೇಶ್ವರ ಮಠಕ್ಕೆ ಪ್ರತಿನಿತ್ಯವೂ ತಂಡೋಪತಂಡವಾಗಿ ಬರುತ್ತಿದ್ದರು. ಗುಳೇದಗುಡ್ಡದಿಂದ ಶ್ರೀ ಗಳವರ ಪ್ರಶಾಂತ ಮಠದ ಸ್ಥಾನ ಎರಡು ಮೂರು ಕಿಲೊಮೀಟರ ದೂರದಲ್ಲಿದ್ದರೂ ಅಷ್ಟೊಂದು ಭಕ್ತಿ ಶ್ರದ್ಧೆಗಳನ್ನು ಬೆಳೆಸಿಕೊಂಡ ದೈವೀಭಕ್ತರು ಗುಳೇದಗುಡ್ಡದ ಜನರು ಇವರಲ್ಲಿ ಶೀಲವಂತ ಸಿದ್ದಪ್ಪರೇಬವರು ಅಪಾರವಾದ ಶ್ರದ್ಧೆಯಿಂದ ಮಠಕ್ಕೆ ನಡೆದುಕೊಳ್ಳುತ್ತಿದ್ದರು. ಆಚಾರ್ಯ ನಿಷ್ಠರು, ವಿನಯ ವಿವೇಕ ಶೀಲ ಧರ್ಮಾಭಿಮಾನಿಗಳು ಜೀವನು ಹುಟ್ಟು-ಸಾವುಗಳ ಬಂಧನವನ್ನು ತಪ್ಪಿಸಿಕೊಂಡು ಮೋಕ್ಷವೆಂಬ ಮಹಾಮಂದಿರದಲ್ಲಿ ಸದಾ ಸಂತೃಪ್ತಿಯ ಹೊಂದಲು ಆರು ಸೋಪಾನಗಳಿಂದಲೇ ಸುಲಭ ಸಾಧ್ಯವೆಂದು ವೀರಶೈವದ ಧರ್ಮತತ್ವಗಳಲ್ಲಿ ಚನ್ನಾಗಿ ಷಟುಸ್ಥಲದಲ್ಲಿ ನಿರೂಪಿಸಿದ್ದಾರೆ ಅವು ಯಾವವೆಂದರೆ ೧) ಭಕ್ತ ೨) ಮಹೇಶ ೩) ಪ್ರಸಾದಿ ೪) ಪ್ರಾಣಲಿಂಗಿ ೫) ಶರಣ ೬) ಐಕ್ಯ ಇವೇ ಆರು ಸೋಪಾನಗಳನ್ನು ಒಂದೊಂದೇ ಮೆಟ್ಟಲನ್ನು ಮೆಟ್ಟುತ್ತ ಮುಂದಿನ ಸೋಪಾನಗಳನ್ನು ಹತ್ತುವಾಗ ಹಿಂದಿನ ಕ್ರಿಯಾಚರಣೆಗಳನ್ನು ಮರೆಯದೆ ಮಾಡುತ್ತ ಕೊನೆಗೆ ಐಕ್ಯ ಸ್ಥಳದ ಸೋಪಾನ ದಲ್ಲಿ ಅಖಂಡ ಗೋಲಾಕಾರವಾಗಿರುವ ಲಿಂಗವು ತಾನೆಂದರಿವುದೇ ಮೋಕ್ಷವು ಆದಕ್ಕೆಂದೇ ಬಸವಣ್ಣನವರು ಕೂಡಾ ತಮ್ಮ ಬೆಡಗಿನ ವಚನದಲ್ಲಿ ಹೀಗೆ ಹೇಳಿದ್ದಾರೆ. "ಹೃದಯ ಕಮಲದಲ್ಲಿ ಲಕ್ಷವಿಟ್ಟು ನೋಡುವ ದೇವರು ದೇವರಲ್ಲ ಭ್ರೂಮಧ್ಯದಲ್ಲಿ ಲಕ್ಷವಿಟ್ಟು ನೋಡುವ ದೇವರು

CC-0. Jangamwadi Math Collection. Digitized by eGangotri

ದೇವರಲ್ಲ, ನಾಸಿಕಾಗ್ರದಲ್ಲಿ ಲಕ್ಷವಿಟ್ಟು ನೋಡುವ ದೇವರು ದೇವರಲ್ಲ
ಅಖಂಡ ಗೋಳಾಕಾರವಾಗಿರುವ ಲಿಂಗವು ತಾನೆಂದರಿದಡೆ ತಾನೇ ದೇವ
ಕಾಣಾ ಅಪ್ರಮಾಣ ಕೂಡಲ ಸಂಗಮದೇವಾ" ಇದಲ್ಲದೇ ಈ ಷಟುಸ್ಥಲದ
ಆಚರಣೆಯನ್ನು ವೀರಶೈವ ಧರ್ಮದವನಾದ "ಸಿದ್ಧಾಂತ ಶಿಖಾಮಣಿ" ಎಂಬ
ಗ್ರಂಥದಲ್ಲಿ ಚೆನ್ನಾಗಿ ವಿವರಿಸಿದ್ದಾರೆ. ಶರಣನು ತಾನು ಸರ್ವಾಚಾರ ಸಂಪನ್ನ
ನಾಗಿ ಯಾವದೇ ಸ್ಥಲದಲ್ಲಿ ನಿಂತು ಇತರ ಸ್ಥಲಗಳನ್ನು ಅಂಗವಾಗಿಟ್ಟು
ಆಚರಿಸಿದರೆ ಮೋಕ್ಷವಾಗುವದೆಂದು ಸ್ಪಷ್ಟವಾಗಿ ನಿವೇದಿಸಿದ್ದಾರೆ. ಬಾಯಿಂದ
ಸುಲಭವಾಗಿ ಎಲ್ಲರೂ ಹೇಳಬಹುದು ಕೃತಿಯಲ್ಲಿ ಆಚರಿಸಿ ತೋರಿಸುವವರು
ವಿರಳ. ಗುಳೇದಗುಡ್ಡದ ಶೀಲವಂತ ಸಿದ್ದಪ್ಪನವರಿಗೆ ಗುರುವಿನಿಂದ ಪ್ರಸಾದಿ
ಸ್ಥಲದ ಅನುಗ್ರಹವಾಗಿತ್ತು. ಪ್ರಸಾದಿಕರಾದ ಮೇಲೆ ಪ್ರತಿದಿವಸ ಗುರುವಿನ
ಪಾದಪೂಜೆ ಮಾಡಿ ಪಾದೋದಕ ತೆಗೆದುಕೊಂಡು ಪವಿತ್ರರಾಗಬೇಕು ಅಂದರೇ
ಅಷ್ಟಾವರ್ಣದ ಕ್ರಮವು ಸರಿಯಾಗಿ ನಡೆಯುಬೇಕಾಗುವದು ಇದಕ್ಕಾಗಿ ಗುರುಗಳು
ಒಬ್ಬರು ಬೇಕಾಗಿತ್ತು. ವರ್ಷದ ಹನ್ನೆರಡು ತಿಂಗಳಲ್ಲಿ ಪವಿತ್ರವಾದ ಶ್ರಾವಣ
ಮಾಸವು ಬರುವದರಲ್ಲಿತ್ತು. ಸಿದ್ದಪ್ಪನವರು ಹುಚ್ಚೇಶ್ವರ ಮಠಕ್ಕೆ ಬಂದಾಗ
ಒಂದು ದಿನ ಹುಚ್ಚೇಶ್ವರ ಶ್ರೀಗಳು "ಸಿದ್ದಪ್ಪನವರೆ ನೀವು ಬಹು ಪುಣ್ಯವಂತರು
ನಿಮ್ಮ ಬಹಾ ದಿನದ ಬೇಡಿಕೆಯು ಕನಸು ಇಂದು ನನಸಾಗುವದು ನಿಮ್ಮ
ಸಂಕಲ್ಪವು ಈಡೇರುವದು." ಎಂದು ಹೇಳಿದರು ಅದಕ್ಕೆ ಸಿದ್ದಪ್ಪನವರು
"ಇದೇನು ಬುದ್ಧಿ ! ಹೀಗೆ ಹೇಳುವಿರಲ್ಲಾ" ಎಂದು ಉತ್ಸುಕನಾಗಿ ಕೇಳಲು

"ಹೌದು ಸಿದ್ದಪ್ಪನವರೆ ! ಷಟುಸ್ಥಲ ಆಚರಣೆಯಲ್ಲಿ ಸಿದ್ಧಹಸ್ತರಾದ
ಕಾಡಸಿದ್ಧರೆಂಬ ಶಿವಾಚಾರ್ಯರುಗಳು ನಮ್ಮಲ್ಲಿ ದಯಮಾಡಿಸಿದ್ದಾರೆ. ಪ್ರತಿ
ನಿತ್ಯ ಶ್ರಾವಣ ಮಾಸದ ಅನುಷ್ಠಾನಕ್ಕೆ ಒಂದು ತಿಂಗಳ ವರೆಗೆ ಕಳಿಸುತ್ತೇವೆ
ಪ್ರತಿ ದಿನವೂ ಶ್ರೀ ಕಾಡಸಿದ್ಧರಿಂದ ಪೂಜೆ ಮಾಡಿಸಿ ಪುಣ್ಯಶಾಲಿಯಾಗುವೆಯಾ"
ಎನ್ನಲು ಶಿದ್ದಪ್ಪನವರು "ಬುದ್ದಿ ಇದು ನನ್ನ ಪರಮ ಭಾಗ್ಯ, ರೋಗಿ
ಬಯಸಿದ್ದನ್ನೇ ವೈದ್ಯರು ಹೇಳಿದಂತೆ ಭವರೋಗಿಯಾದ ನನ್ನ ಸಂಕಲ್ಪ
ನೀಗಿಸಲು ಶಿವಯೋಗಿಯು ಕಳುಹಿಸಿ ಭವ ದುಃಖವನ್ನು ದೂರ ಮಾಡಿರಿ"
ಎಂದು ಸಂತೋಷಪಟ್ಟು ಲಗುಬಗೆಯಿಂದ ಒಂದು ಟೆಂಗಿನಕಾಯಿ ತಂದು ಶ್ರೀ
ಕಾಡಸಿದ್ಧರ ಅಡಿದಾವರೆಗಳಲ್ಲಿಟ್ಟು ಸಾಷ್ಟಾಂಗ ಪ್ರಣೀತನಾಗಿ ಭಯ ಭಕ್ತಿಯಿಂದ
"ಬುದ್ದೀ ಮಾನವ ಜನ್ಮದಸಾರ್ಥಕ ಮಾಡುವ [illegible] ಪವಿತ್ರ

CC-0. Jangamwadi Math Collection. Digitized by eGangotri

ಶ್ರಾವಣ ಮಾಸವು ಪೂರ್ತಿಯಾಗುವ ವರೆಗೆ ತಾವು ನನ್ನ ಮನೆಯಲ್ಲಿದ್ದು ಶಿವಪೂಜೆ ಲಿಂಗಾರ್ಚನೆಗಳನ್ನು ಮಾಡಬೇಕು. ಈ ಬಡವನ ಬಿನ್ನಹ ಮಾನ್ಯ ಮಾಡಿ ತಾವು ದಯಮಾಡಿಸಬೇಕೆಂದು ಕೇಳಿಕೊಂಡರು.

ಪುರದ ಪುಣ್ಯವೋ ಹರನ ಹರಕೆಯೋ ಪಶತತ್ವವನ್ನರಿತ ಮಹಾ ವೈರಾಗ್ಯಶೀಲರನ್ನು ಭಕ್ತರು ಕಣ್ತುಂಬ ಕಾಣಬೇಕೆಂಬ ಕಾತುರವೋ ಅಂತೂ ಸ್ವಾಮಿಃ ಭಕ್ತಿಯು ಶೀಲವಂತ ಸಿದ್ದಪ್ಪನವರ ಅಂತಃಕರುಣ ತುಂಬಿದ ಅವರ ನುಡಿಗಳನ್ನು ಅಂತರಂಗದಲ್ಲಿ ತಿಳಿದುಕೊಂಡು ಅವರ ಬೇಡಿಕೆಗೆ ಮಾನ್ಯಮಾಡಿ ಮನದಲ್ಲಿ ಮೂಲ ಪೀಠದ ಕಾಡಸಿದ್ಧರನ್ನು ಸ್ಮರಿಸಿ ಹುಚ್ಚೇಶ್ವರ ಸ್ವಾಮಿಗಳಿಂದ ಬೀಳ್ಕೊಂಡು ಗುಳೇದಗುಡ್ಡಕ್ಕೆ ಶ್ರೀಗಳು ದಯಮಾಡಿಸಿದರು. ಭಕ್ತರ ಭಕ್ತಿಯ ಬಂಧನ ಸಾಮಾನ್ಯವಾದುದಲ್ಲ ದೇವರ ದೇವ ಕೂಡಾ ದಾಸರ ದಾಸನಾಗಿ ಬಾಗಿಲ ಕಾಯುತ್ತ ಮನೆಯಂಗಳ ಕಸಗೂಡಿಸಿದ್ದನ್ನು ಎಷ್ಟೋ ಚರಿತ್ರೆಗಳಲ್ಲಿ ನೋಡಬಹುದು. ದೇವರಿಗೆ ವಿಶ್ರಾಂತಿ ಸ್ಥಾನ ಭಕ್ತನ ಹೃದಯ ಅಲ್ಲವೆ ?

ಗುಳೇದಗುಡ್ಡದಂತಹ ಭಕ್ತರ ಹೃದಯದಲ್ಲಿ ಶ್ರೀ ಕಾಡಸಿದ್ಧರಂತಹ ದೇವರು ತಪೋನಿಧಿಗಳು ಕಾಣಿಸಿಕೊಂಡು ದಯಮಾಡಿಸಿದ್ದು ಕೂಡಾ ಸುಯೋಗವೆಂದೇ ಹೇಳಬಹುದು. ಬದುಕಿನ ಪ್ರಧಾನ ಶಕ್ತಿ ಭಕ್ತಿಯೊಂದಿಗೆ ಬೆರೆಯಬೇಕು, ಶಿವ ಕೃಪೆಯಿಂದ ಭುವಿಗೆ ಬಂದ ನಾವು ಶಿವನನ್ನೇ ಮರೆತು ಕೃತಘ್ನರಾಗಬಾರದು. ಅಂತಹ ಶಿವತತ್ವವನ್ನು ಸಾಧಿಸಿದ ಶರಣರ ಪಾದ ಧೂಳಿಯಿಂದ ಗುಳೇದಗುಡ್ಡ ಗ್ರಾಮವನ್ನು ಪಾವನ ಮಾಡಲು ಅನುಭಾವಿಗಳು ಸದಾ ಪ್ರಯತ್ನಿಸುತ್ತಿದ್ದರು. ಅಂಥವರಲ್ಲಿ ಸದ್ಭಕ್ತ ಶೀಲವಂತ ಸಿದ್ದಪ್ಪನವರು ಕೂಡಾ ಅಗ್ರಗಣ್ಯರೆಂದು ಹೇಳಿದರೆ ತಪ್ಪಾಗಲಾರದು. ಮನೆತನದಿಂದ ಶ್ರೀಮಂತರು ಶ್ರೀಮಂತಿಕೆಗೆ ತಕ್ಕಂತೆ ಗೊಡ್ಡಗುಣದವರು. ಸಿದ್ದಪ್ಪನವರ ಧರ್ಮಪತ್ನಿ ಪುಟ್ಟಮ್ಮನು ಕೂಡಾ ಪತಿ ಭಕ್ತಿಯುತ ಸದಾಚಾರ ಸವಿನಯ ಸಂಪನ್ನಳು. ಜಾಣೆ ಜಾಣನು ಕೂಡಲವು ಶ್ರುತಿಗೂಡಿದ ವೀಣೆಯಂತೆ ಸತಿಪತಿಗಳೊಂದಾದ ಭಕ್ತಿ ಹಿತವಾಗಿರ್ಪುದು ಶಿವನಿಗೆ. ಎಂಬಂತೆ ನಡೆನುಡಿಯು ಗಾಂಭೀರ್ಯದಿಂದ ತುಂಬಿಕೊಂಡವಳು. ನಮ್ಮ ಕಾಡಸಿದ್ಧ ಶ್ರೀಗಳು ಈ ಶರಣ ದಂಪತಿಗಳ ಮನೆಯಲ್ಲಿ ಶ್ರಾವಣ ಮಾಸದಲ್ಲಿ ಶಿವಪೂಜೆ ಪ್ರಾರಂಭಿಸಿದರು. ದಿನದಿಂದ ದಿನಕ್ಕೆ ಗುರುಶಿಷ್ಯರಲ್ಲಿ ಅನ್ಯೋನ್ಯವಾದ ಮೈತ್ರಿ ಬೆಳೆದು ತುಂಬಾ ವಿಶ್ವಾಸ ಬೆಳೆಯಿತು. ಎಂದೆಂದೂ ಅಗಲಿಲ್ಲದ ಭದ್ರವಾದ

CC-0. Jangamwadi Math Collection. Digitized by eGangotri

ಸಂಬಂಧದ ಬೆಸುಗೆಯಷ್ಟಾಗಿ ಕೂಡಿತು. ದ್ವೇಷವಿಲ್ಲದ ಭಕ್ತ, ಆಸೆ ಇಲ್ಲ ವಿರಕ್ತ, ಸಂಸಾರದ ಪಾಶವಿಲ್ಲದ ಗುರು ಈ ಮೂರು ಈಶ್ವರನ ಸ್ವರೂ ನಲ್ಲದೆ ಸದಾಶಿವ ಮೂರ್ತಿಗಿಂತತ್ತ ನಿಖಿಲನಾದ ನಿಷ್ಕಲಂಕ ಆತನೇ ಚನ್ನಮ ಕಾರ್ಜುನಯ್ಯಾ" ಎಂಬ ಅಕ್ಕನ ವಚನದಂತೆ ಶಿವ್ದಪ್ಪನವರ ಮನೆಯ ಪ್ರತಿನಿತ್ಯ ಚನ್ನಮಲ್ಲಿಕಾರ್ಜುನನು ನಲಿವಂತೆ ಶಿವಲೋಕವಾಗಿ ಪರಿಶೋ ಸುತ್ತಿತ್ತು, ಸಿದ್ದಪ್ಪನವರಿಗೆ ಗಂಡುಮಕ್ಕಳಿರಲಿಲ್ಲ. ಇಬ್ಬರು ಹೆಣ್ಣು ಮಕ್ಕಳಿದ್ದ ಅವರಾದರು ಒಂದು ದಿನ ಮದುವೆಮಾಡಿಕೊಂಡು ಕೊಟ್ಟ ಮನೆಗೆ ಹೋ ತಕ್ಕವರು ಹೀಗೆ ಒಂದು ದಿನ ಯೋಚಿಸಿ "ಆಹಾ ಶಿವನು ನಮಗೆ ಸಾಕಷ್ಟು ಸಂಪತ್ತನ್ನು ಕೊಟ್ಟಿದ್ದಾನೆ ಆದರ ಹಕ್ಕುದಾರರಾಗಿ ನಮಗೆ ಗಂಡು ಸಂತಾ ಕೊಡಲಿಲ್ಲ ಎಷ್ಟೊಂದು ಉಪಕಾರ ಮಾಡಿರುವನಲ್ಲಾ ಮನೆ ಮಾರು ಆಸ್ತಿ ಪಾಸ್ತಿ ಎಲ್ಲವೂ ಶಿವನದು, ಈ ಆಸ್ತಿ ಅಣ್ಣನ ಮಕ್ಕಳಿಗಾಗಲಿ ತಮ್ಮ ಮಕ್ಕಳಿಗಾಗಲಿ ಯಾರಿಗೂ ಮಾಡದೇ ಮಾಡದೆ ಶಿವಕೊಟ್ಟಿದ್ದನ್ನು ಶಿ ರೂಪಿಯಾಗಿ ಬಂದು ಭವತಾಪವನ್ನು ನೀಗಿಸಿದ ಶ್ರೀಗಳ ಹೆಸರಿನ ಬರೆಯಿಸಿ ತ್ರಿಕರಣ ಪೂರ್ವಕವಾಗಿ ಗುರುಗಳಿಗೆ ದಾನಪತ್ರ ಮಾಡಬೇಕೆಂದು ಸಂಕಲ್ಪಿಸಿದರು. ಶ್ರಾವಣ ಮಾಸದ ದಿನನಿತ್ಯದ ಶಿವಪೂಜೆಗಾಗಿ ಪತ್ರಿಯನ್ನು ತರಲಿಕ್ಕೆ ಎರಡು ಕಿಲೋಮೀಟರ ಪ್ರಮಾಣದಲ್ಲಿ ತಾನು ವಿಶ್ರಾಂತಿಗಾಗಿ ಕಟ್ಟಿಸಿದ ಬಂಗಲೆಯ ಸ್ಥಾನದಲ್ಲಿ ಕೇವಲ ಒಂದೆರಡು ಪತ್ರಿಯ ಗಿಡಗಳಿದ್ದವು. ಶ್ರೀಗಳೊಂದಿಗೆ ತಾನೂ ಇಬ್ಬರೂ ಬರುತ್ತಿದ್ದರು. ಬಂಗಲೆಯ ಹತ್ತಿರ ಚಿಕ್ಕದಾದ ಗುಡ್ಡದ ದಿನ್ನೆಯಿದೆ. ಮೇಲೆ ಬಹುಕಾಲದ ಗುಡಿಯಿದೆ ಬಹುಶ ಜಕ್ಕಣನ ಕಟ್ಟಡದಂತೆ ಹೋಲುತಿವೆ ಅದು ಸೋಮೇಶ್ವರ ದೇವಸ್ಥಾನವೆಂದು ಪ್ರತೀತಿ. ಒಂದು ದಿನ ಸ್ಟೇಶನ್ ರೋಡಿನಲ್ಲಿದ್ದ ಈ ತಮ್ಮ ಬಂಗಲೆಯಲ್ಲಿ ಪತ್ರಿಯನ್ನು ತಕ್ಕೊಂಡು ವಿಶ್ರಮಿಸಿದಾಗ ನೆಲದ ಗುಣವೋ ಅಥವಾ ಶ್ರೀ ಕಾಡಸಿದ್ದರ ಕಾಲ್ಗುಣವೋ ಅವರ ಅಂತರಾತ್ಮದಿಂದ ಮುತ್ತಿನಂಥ ಮಾತು ಹೊರಹೊಮ್ಮಿತು "ನೋಡಿ ಸಿದ್ದಪ್ಪನವರೇ ವಿರಕ್ತರು ಸನ್ಯಾಸಿ ಗಳು ನಗರ ಜೀವನದ ಮಧ್ಯ ಗಲಿ ಬಿಲಿಯ ಸ್ಥಾನದಲ್ಲಿ ಇರಬಾರದು. ಅಂತರಂಗದ ಶಿವಪೂಜೆಯು ಏಕಾಂತಕ್ಕೆ ಭಂಗವಾಗಿ ಪೂಜೆ ತೃಪ್ತಿಕರವಾಗಿ ನಡೆಯುದು. ಈ ಸ್ಥಾನ ನೋಡ್ರಿಪಾ ಪೂರ್ವಿಕರ ಆಶ್ರಮದ ಸ್ಥಾನ ಇದ್ದಂಗ ಐ ನಿಸರ್ಗದ ಸುಂದರವಾದ ಏಕಾಂತ ಸ್ಥಾನ ಅದಕ್ಕಾಗಿ ಬೇಕಾದರೆ ನೀವು ಕೊಡಾ ಇಲ್ಲಿ

CC-0. Jangamwadi Math Collection. Digitized by eGangotri

ನಮ್ಮೊಂದಿಗೆ ಇದ್ದುಬಿಡಿ. ಶಿವಪೂಜೆ ಲಿಂಗಾನುಷ್ಠಾನ ತೃಪ್ತಿಯಾಗಿ ನಡೆದು ಶಿವ ಮೆಚ್ಚುಗೆಯಾಗುವದು, ಊರಲ್ಲಿ ಜನರ ಜಂಜಾಟ ಬಹಳ ಇದಕ್ಕೆ ನಿಮ್ಮ ಒಪ್ಪಿಗೆಯೇ ?" ಎಂದು ಕೇಳಲು ತಾವು ಈ ಒಳಗಾಗಿ ಹುದುಗಿದ್ದ ಮನದ ಬಯಕೆಯನ್ನು ಶಿವನೇ ಗುರುಗಳ ಮುಖಾಂತರ ನುಡಿಸುತ್ತಿರುವನಲ್ಲಾ ಎಂದು ಆಗಲೇ ಹೇಳಬೇಕೆಂದು ಹಂಬಲ ತುಂಬಿ ಬಂದಿತ್ತಾದರೂ ಹಾಗೆ ಹೇಳಬಾರದೆಂದು ತಡೆದು "ಆಗಲಿ ಬುದ್ಧೀ ! ತಮ್ಮ ಆಶೀರ್ವಾದದಂತೆ ಆಗಲಿ" ಎಂದು ಸುಮ್ಮನಾದರು, ಒಂದೆರಡು ತಾಸು ಪ್ರಕೃತಿ ಸೌಂದರ್ಯದೊಂದಿಗೆ ವಿರಮಿಸಿ ಪತ್ರಿತಕ್ಕೊಂಡು ಊರಿಗೆ ಮರಳಿದರು. ಶ್ರಾವಣ ಮಾಸದ ಪೂಜೆ ಪರಿಸಮಾಪ್ತಿಯ ಪುಣ್ಯ ದಿನ ಬಂತು ಮಡಿ ಹುಡಿಯಿಂದ ತ್ರಿಕರಣ ಶುದ್ಧಿಯಿಂದ ಮನೆಯನ್ನೆಲ್ಲಾ ಸಾರಣಮಾಡಿ ಶೃಂಗರಿಸಿ ಎಲ್ಲ ಜಂಗಮರಿಗೆ ಆಮಂತ್ರಿಸಿ, ಕಾಡಸಿದ್ಧ ಶ್ರೀಗಳ ಪಾದಪೂಜೆ ಮಾಡಿದನು ಪಾದೋದಕದಿಂದ ದಂಪತಿಗಳು ಪವಿತ್ರರಾದರು ಜಂಗಮರೆಲ್ಲರಿಗೆ ಪ್ರಸಾದಕ್ಕೆ ಎಡೆಯನ್ನು ಮಾಡಿ ಬುದ್ಧಿಗಳ ಪಾದಕ್ಕೆ ಸಾಷ್ಟಾಂಗ ಹಾಕಿ ಬೇಡಿಕೊಂಡರು, " ಬುದ್ಧೀ ನನ್ನದೊಂದು ಸಂಕಲ್ಪವಿದೆ ತಾವು ಅಪ್ಪಣೆ ಕೊಡಬೇಕು '' ಎಂದರು ಶ್ರೀಗಳವರಿಗೆ ಆಶ್ಚರ್ಯವಾಗಿ " ಏಳಿ ಸಿದ್ಧಪ್ಪನವರೇ ನಿಮ್ಮ ಸಂಕಲ್ಪವೇನಿದೆ ಹೇಳಿರಿ '' ಎನ್ನಲು, ಸಿದ್ಧಪ್ಪನವರು '' ಬುದ್ಧೀ ತಾವು ನನಗೆ ವಚನ ಕೊಡಬೇಕು ಅಂದರೆ ಏಳುತ್ತೇನೆ '' ಎಂದರು, ಕಾಡಸಿದ್ಧರಿಗೆ ಮತ್ತಿಷ್ಟು ಆಶ್ಚರ್ಯವಾಗಿ ನಾವು ಬಂದು ತಿಂಗಳ ಮಾಗಿಯುತ್ತಿದೆ ಬಹಳವಾದರೆ ಇನ್ನು ನಾಲ್ಕೆಂಟು ದಿವಸ ತಮ್ಮ ಮನೆಯಲ್ಲಿ ಇರಲಿಕ್ಕೆ ಕೇಳಬಹುದೆಂದು ತಿಳಿದು " ಏಳ್ರೆಪ್ಪಾ ಏಳಿ 'ಎಂದರೂ ಏಳಲಿಲ್ಲ ಆಗ ಶ್ರೀಗಳು" ಸಿದ್ಧಪ್ಪನವರೇ ನಿಮ್ಮ ಸಂಕಲ್ಪವೇನು ಹೇಳಿ ಅದು ಶಿವನಪ್ಪಣೆಯೆಂದು ಕೇಳುತ್ತೇವೆ '' ಎನ್ನಲು. ಸಿದ್ಧಪ್ಪನವರು " ಬುದ್ಧಿ ದಿನಾಲೂ ಶಿವ ಪೂಜೆಗೆ ಪತ್ರೀ ತರಲು ನಮ್ಮ ಬಂಗಲೆಗೆ ಹೋಗುವದಿಲ್ಲವೆ ? ಆ ಬಂಗಲೆಗೆ ಹತ್ತಿ ಒಂದು ಎಕರೆ ಮೂರು ಗುಂಟೆ ಹೊಲಾ ಮತ್ತು ಬಂಗ್ಲೆ ನಾವು ಮಾಡಿದ ಸಾಮಾನು ತಮ್ಮ ಪಾದಕ್ಕೆ ಸಲ್ಲಿಸುತ್ತೇವೆ. ತಾವು ಆ ಬಂಗಲೆಯ ನಾಲ್ಕೂ ದಿಕ್ಕಿಗೆ ಲಿಂಗಮುದ್ರೆ ಹಾಕಿ ಮಠಾ ಮಾಡಿರಿ. ತಮ್ಮ ಹಡಗಲಿಯ ಮೂಲ ಪೀಠಕ್ಕೆ ಶಾಖಾ ಮಠವಾಗುವದು. ತಾವು ಅಲ್ಲಿ ಶಿವಪೂಜೆ ಲಿಂಗಾರ್ಚನೆ ಅನುಷ್ಠಾನಗಳನ್ನು ಮಾಡಿಕೊಳ್ಳುತ್ತ ತಮ್ಮ ಗದ್ದುಗೆಯನ್ನು ಅಲ್ಲೇ ಮಾಡಿಸಿರಿ, ಮತ್ತು ನನ್ನ ಸಮಾಧಿ ಕೂಡಾ ತಮ್ಮ ಹತ್ತಿರ ಪಾದ ಸನ್ನಿಧಿಯಲ್ಲೇ ಆಗಲಿ, ಜಡ

CC-0. Jangamwadi Math Collection. Digitized by eGangotri

ಶರೀರದಿಂದ ನಾವು ಕಣ್ಮರೆಯಾದರೂ ಸೂಕ್ಷ್ಮ ಶರೀರದಿಂದ ಸೂರ್ಯ ಚಂದ್ರಾ
ದಿಗಳು ಇರುವ ಪರಿಯಂತ ತಮ್ಮ ಶಿವಪೂಜೆ ನಡೆಯಬೇಕು. ಈ ಸ್ಥಾ
ಭೂಕೈಲಾಸದಂತೆ ಯಾವಾಗಲೂ ಪಾವನವಾಗಿರಲೆಂದೇ ನಮ್ಮ ಸಂಕಲ್ಪ
ಎಂದರು. ಶ್ರೀಗಳು ದಿಗ್ಭ್ರಾಂತರಾದರು, ಸಿದ್ದಪ್ಪನವರ ಪರಮ ವೈರಾ
ಶೀಲ ತ್ಯಾಗಕ್ಕೆ ಏನು ಹೇಳಬೇಕೆಂಬುದೇ ತೋಚದು. ಬಸವಣ್ಣನವ
"ಬ್ರಹ್ಮ ಪದವಿಯನೊಲ್ಲೆ, ವಿಷ್ಣು ಪದವಿಯನೊಲ್ಲೆ, ರುದ್ರ ಪದವಿಯನೊಲ್ಲೆ
ಮತ್ತಾವ ಪದವಿಯನೊಲ್ಲೆ ನಿಮ್ಮ ಶರಣರ ಬಾಗಿಲ ಕಾಯುವ ಶುನಕನನ್ನಾ
ಮಾಡಿ ಇರಿಸಯ್ಯಾ" ಎಂದು ಹೇಳಿದ ವಚನ ಸಿದ್ದಪ್ಪನವರು ತಮ್ಮ ಜೀವ
ಕ್ಕಳವಡಿಸಿದುದು ಕಂಡು ಶ್ರೀಗಳವರಿಗೆ ಅಚ್ಚರಿಪಡಿಸಿತು ಶಿವನಪ್ಪಣೆಯೆಂ
ಭಾಷೆ ಬೇರೆ ಕೊಟ್ಟಿದ್ದಾಗಿತ್ತು. "ಆಗಲಿ ಎಲ್ಲವೂ ಕಾಲಾಧೀನ ಕಾಡಸಿದ್ಧೇ
ಲೀಲಾಧೀನ" ಎಂದು ಪ್ರಸಾದಕ್ಕೆ ಆಶೀರ್ವದಿಸಿದರು. ಮುಂದೆ ಕೆಲ
ದಿನಗಳಲ್ಲಿ ತಮ್ಮ ಆಸ್ತಿಯನ್ನೆಲ್ಲಾ ಶ್ರೀಗಳ ಪಾದಕ್ಕೆ ದಾನರೂಪವಾ
ನುಡಿದಂತೆ ಕೊಟ್ಟುಬಿಟ್ಟರು. ಹೀಗೆ ತಮ್ಮ ಬದುಕನ್ನು ಬೆಳಗಿಸಿಕೊಂಡ
ಶ್ರೀಗಳವರ ಸಹವಾಸದಲ್ಲಿ ದಂಪತಿಗಳಿಬ್ಬರೂ ಸೇವಾ ತತ್ಪರರಾದರು
ಹೀಗೆ ಕೆಲವು ದಿನ ಕಳೆದ ಮೇಲೆ ಗುರುಭಕ್ತಿಯಿಂದ ತನುವು ಪರಿಶುದ್ಧವಾ
ಲಿಂಗಪೂಜೆಯಿಂದ ಮನವು ನಿರ್ಮಲವಾಗಿ ಜಂಗಮ ದಾಸೋಹದಿ
ಧನದ ವ್ಯಾಮೋಹ ನೀಗಿ ಭವಿಯಾಗದೆ ಭಕ್ತನಾಗಿ ಸಿದ್ದಪ್ಪನವರು ಶಿವಾಧೀ
ರಾದರು. ಅವರ ಸಮಾಧಿ ಅಲ್ಲಿ ಈಗಲೂ ಕಾಣಬಹುದು. ಮುಂದೆ ಅವ
ಪತ್ನಿಯಾದ ಪುಟ್ಟಮ್ಮನವರೊಬ್ಬರೇ ಉಳಿದರು. ಅವರನ್ನು ಜೋಪಾ
ಮಾಡುವ ಜವಾಬ್ದಾರಿ ಶ್ರೀಗಳವರ ಮೇಲೆ ಬಿತ್ತು. ಆ ಪುಟ್ಟಮ್ಮತಾಯಿ
ಶಿವಶರಣೆಗೆ ಯಾವ ದುಃಖಗಳು ಬಾರದಂತೆ ಜೋಪಾನ ಮಾಡಹತ್ತಿದರು
ಒಂದು ದಿನವೂ ಪುಟ್ಟಮ್ಮ ಎಂದು ಕರೆಯದೇ "ಅವ್ವಾ ನನ್ನವ್ವಾ" ಎಂದು
ಕರೆಯುತ್ತಿದ್ದರು. ಪುಟ್ಟಮ್ಮನವರು ಕೂಡಾ "ಅಪ್ಪಾ ನನ್ನಪ್ಪಾ" ಎಂದು
ಕರೆಯುತ್ತಿದ್ದರು. ಈ ರೀತಿಯಾಗಿ ತಾಯಿ ಮಕ್ಕಳೋಪಾದಿಯಲ್ಲಿ ತಾಯಿ
ಆಜ್ಞೆಯಂತೆ ಜೀವನ ಸಾಗಿಸುತ್ತಿರುವಾಗ ಶ್ರೀಗಳವರ ಅಣ್ಣ ಸಂಗಯ್ಯನವರ
ಬಂದು 'ನೀವು ಹಡಗಲಿಯ ಮೂಲ ಮಠವನ್ನು ಬಿಟ್ಟು ಇಲ್ಲಿ ಬಂದು ಕುಳಿತಿರು
ಮಠದ ಆಸ್ತಿಯೆಲ್ಲಾ ಇನ್ನು ಕೆಲವು ದಿವಸ ಹೀಗೆ ನೀವು ಕಳೆದರೆ ನ್ಯಾಯ
ತೀರ್ಮಾನದಿಂದ ನಮ್ಮ ಕೈಬಿಟ್ಟು ಹೋಗುವದು, ನೀವು ಬರಲೇಬೇಕೆಂದು

CC-0. Jangamwadi Math Collection. Digitized by eGangotri

ಒತ್ತಾಯ ಮಾಡಹತ್ತಿದರು. ಆಗ ಕಾಡಸಿದ್ಧರು "ಸಂಗಣ್ಣನವರೇ ನಮಗೆ ಯಾವ ಆಸ್ತಿಯೂ ಬೇಡಾ ಶಿವನ ಕೃಪೆ ನಮ್ಮ ಮೇಲೆ ಸಂಪೂರ್ಣವಿದೆ. ನಾವು ಇಲ್ಲಿ ತೃಪ್ತಿಯಿಂದ ಇದ್ದೇವೆ. ನೀವೆ ನ್ಯಾಯವಾಮಾಡಿ ನಮ್ಮ ಆಸ್ತಿಯನ್ನು ಬೇಕಾದ ಹಾಗೆ ಉಪಭೋಗ ಮಾಡಿರಿ. ಇಲ್ಲಿಂದ ಬರಲಿಕ್ಕೆ ಸುಮ್ಮನೆ ತ್ರಾಸು ಕೊಡಬೇಡಿರಿ ಶಿವನು ನಿಮಗೆ ಒಳ್ಳೆಯದನ್ನು ಮಾಡುತ್ತಾನೆ ಹೋಗಿರಿ" ಎಂದರೂ ಅವರು ಕೇಳಲಿಲ್ಲ ಮತ್ತಿಷ್ಟು ಕೋಪದಿಂದ "ನೀವು ಬರಲೇಬೇಕು. ಒಳ್ಳೆಯ ಮಾತಿನಿಂದ ಬರದಿದ್ದರೆ ನಿಮ್ಮ ಕುತ್ತಿಗೆಗೆ ಕೈಕೊಟ್ಟು ಕರೆದುಕೊಂಡು ಹೋಗುತ್ತೇನೆಂದು" ಒತ್ತಾಯದಿಂದ ಕತ್ತಿಗೆ ಕೈ ಹಚ್ಚಿ ನೂಕ ಹತ್ತಿದರಂತೆ ಆಗ ಶ್ರೀಗಳ ಅಂತರಾತ್ಮ ತಳಮಳಿಸಿ ಕೋಪಿಷ್ಟರಾಗಿ ''ಸಂಗಣ್ಣನವರೆ ಈ ರೀತಿ ನಮ್ಮನ್ನು ಬಲಾತ್ಕಾರ ಮಾಡುವಿರೆಂದ ಮೇಲೆ ನಮ್ಮ ಪ್ರಾಣ ಹೋದರೂ ಚಿಂತೆ ಇಲ್ಲ ನಾವು ಮಾತ್ರ ಬರುವದಿಲ್ಲ. ನೀನು ಹಾಳಾಗಿ ಹೋಗುವದು ಖಂಡಿತ ಹಾಳಾಗಿ ಹೋಗು" ಎಂದು ಕಠೋರ ಮಾತುಗಳನ್ನಾಡಲು, ಸಂಗಣ್ಣನವರಿಗೆ ಆಘಾತ ವಾದಂತಾಗಿ ಅವರ ಹಟದಲ್ಲಿದ್ದ ದಿಟದ ಸ್ವರೂಪಕ್ಕೆ ಬೆದರಿ ಉಪಾಯವಿಲ್ಲದೆ ಬಿಟ್ಟು ಹೋದರಂತೆ ನಿಟ್ಟುಸಿರಿನ ಧಗಧಗಿಪ ಶ್ರೀಗಳ ಅಂತರಾತ್ಮದ ಜ್ವಾಲೆಯು ಸುಡಲಾರದೆ ಬಿಟ್ಟೀತೆ ನೊಂದವರು ನುಡಿದದ್ದೆ ಶಾಪ. ಕೆಲವು ದಿವಸದ ಮೇಲೆ ಸಂಗಣ್ಣನವರಿಗೆ ಮುಪ್ಪಾವಸ್ಥೆ ಪ್ರಾಪ್ತವಾದ ಮೇಲೆ ಪ್ರಸಾದ ಸಿಗದಂತಾಗಿ ಎಲ್ಲರೀಂದ ಛೀ ಥೂ ಅನ್ನಿಸಿಕೊಳ್ಳುತ್ತ ಕೊನೆಗೆ ಕಾಡಶಿದ್ಧರ ಮಠಕ್ಕೆ ಬಂದು ಪ್ರಾಯಶ್ಚಿತ್ತಪಟ್ಟು ತಪ್ಪಾಗಿದೆ ಎಂದು ಪಾದ ಹಿಡಿದು ಆಶೀರ್ವಾದ ಮಾಡಬೇಕೆಂದು ಕೇಳಿಕೊಂಡರಂತೆ ಆಗ ಶ್ರೀಗಳು ''ಸಂಗಯ್ಯನವರೆ ನನ್ನ ಕೈಯಲ್ಲೇನಿದೆ ಎಲ್ಲವೂ ಶಿವನ ಇಚ್ಛೆ. ಇಲ್ಲಿ ನನ್ನದೆಂಬುದು ಕೂಡಾ ಏನೂ ಇಲ್ಲಾ ಒಬ್ಬರ ಆಧೀನದಲ್ಲಿ ನಾವೇ ಇದ್ದೇವೆ. ಬಂದಿರುವಿರೆಂದ ಮೇಲೆ ಶಿವಕೊಟ್ಟ ಪ್ರಸಾದ ತಕ್ಕೊಂಡು ಹೋಗಿರಿ" ಎಂದು ಹೇಳಿವರಂತೆ ಅದಕ್ಕೆಂದೇ "ಕಣ್ಣು ಮನ ನಾಲಿಗೆ ತನ್ನವೆಂದೆಸಬೇಡ ಅನ್ಯರು ಕೊಂದರೆನಬೇಡ ಇವು ಮೂರು ತನ್ನನ್ನು ತಾವು ಕೊಲ್ಲುವವು ಕೂಡಲ ಸಂಗಮದೇವ'' ಎಂದು ಹೇಳಿದ್ದಾರೆ ಬಸವಣ್ಣನವರು. ಅದರಂತೆ ಶ್ರೀಗಳವರ ಅಣ್ಣಂದಿರ ಪರಿಸ್ಥಿತಿಯಾಗಿ ಕೆಲವು ದಿನಗಳಲ್ಲಿ ಶಿವಾಧೀನರಾದ ಮೇಲೆ ಅವರ ಇಬ್ಬರು ಗಂಡುಮಕ್ಕಳಲ್ಲಿ ಚಿಕ್ಕ ಹುಡುಗನನ್ನು ಶೀಲವಂತ

CC-0. Jangamwadi Math Collection. Digitized by eGangotri

ಮುಪ್ಪಣ್ಣನವರ ಮನೆಯಲ್ಲಿಟ್ಟು ನಾಲ್ಕಾರು ವರುಷ ಶಾಲೆಗೆ ಕಳುಹಿ
ಕನ್ನಡ ಏಳನೆಯ ತರಗತಿಯನ್ನು ಮುಗಿಸಿ ತಿರುಗಿ ಮಠಗಳಲ್ಲಿಗೆ ಕಳ್ಳಿ
ಕೊಟ್ಟರಂತೆ. ಈ ರೀತಿಯಾಗಿ ಬದುಕಿನಲ್ಲಿ ನೊಂದವರಿಗೆ ಬೆಂದವ
ಅಭಯ ಅಮೃತದ ಹಸ್ತ ಚಾಚುತ್ತ ಬಡವರ ಬಂಧುಗಳಾಗಿ ಸಮಾಜದ ಹಿ
ಚಿಂತಕರಾಗಿ ನಾಡಿನ ಉದ್ಧಾರಕ್ಕಾಗಿ ತಮ್ಮ ಭೀಷ್ಮ ವೈರಾಗ್ಯದ ತಪೋ
ಬಲವನ್ನು ಧಾರೆ ಎರೆಯುತ್ತ ತ್ರಿಕಾಲವೂ ಲಿಂಗಪೂಜಾ ಸಕ್ತರಾಗಿ ಕಾ
ಕಳೆಯುತ್ತಿದ್ದರು. ಸುತ್ತುಮುತ್ತಲಿನ ಹಳ್ಳಿಯ ಜನರು ಕಾಡಸಿದ್ಧರ ಮಠ
ಬಹಳ ಭಕ್ತಿಯಿಂದ ನಡೆದುಕೊಳ್ಳಹತ್ತಿದರು. ಮಠದ ಸುತ್ತು ಮುತ್ತ
ಪತ್ರಿಯ ಗಿಡಗಳು ಹುಟ್ಟಿ ಪ್ರತಿಯೊಂದು ದಳಗಳಲ್ಲಿ ಶಿವ ಸಂಕೀರ್ತ
ತುಂಬಿ ಶ್ರೀಗಳ ಶಿವಪೂಜೆ, ಲಿಂಗಾರ್ಚನೆ ನಡೆಯುತ್ತಿತ್ತು. ಮಠ
5–6 ಕಿಲೋಮೀಟರ ದೂರದಲ್ಲಿರುವ ತಿಮ್ಮಸಾಗರ ಹಳ್ಳಿಯ ಭಕ್ತರಿಗಂತೂ
ಕಾಡಸಿದ್ಧರು ಪಂಚಪ್ರಾಣವಾದರು. ತಿಮ್ಮಸಾಗರಕ್ಕೆ ಶ್ರೀಗಳು ಕಾಲ್ನಡಿ
ಯಿಂದಲೇ ಹೋಗುತ್ತಿದ್ದರಂತೆ, ಯಾವ ಗಾಡಿಯನ್ನೂ ಹತ್ತುತ್ತಿರಲಿಲ್ಲವ
ಇವರ ಕಾಯಕ ನಿಷ್ಠೆಗೆ ಶಿವಪೂಜಾ ಮಹಿಮೆಗೆ ಊರಿನ ಜನರು ಪ್ರೀತಿಯಿ
ಕರೆದುಕೊಂಡು ಹೋಗಿ ಮನದ ಬಯಕೆಗಳನ್ನೆಲ್ಲಾ ಶ್ರೀಗಳವರ ಪಾದಕ್ಕೆ
ಹಾಕಿ ಶಿವಪೂಜಾ ಮಾಡಿಸಿ ತಿಮ್ಮಸಾಗರ ಕರೆಯಿಂದ ನೀರುಣಿಸಿ ಬೆಳೆ
ಕಾಯಿಪಲ್ಲೆ, ದವಸ ಧಾನ್ಯಗಳನ್ನು ಮಠದ ದಿನನಿತ್ಯದ ಪ್ರಸಾದಕ್ಕೆಂದು
ಕೊಟ್ಟು ಕಳಿಸುತ್ತಿದ್ದರಂತೆ ಶ್ರೀಗಳೇನು ಶಾಸ್ತ್ರಕಾರರಲ್ಲ, ಜ್ಯೋತಿಷಿಗಳ
ಮಂತ್ರ ಗಾರರಲ್ಲ ವೈದ್ಯಗಾರರಂತೂ ಅಲ್ಲವೇ ಅಲ್ಲ ಹಾಗಾದರೆ ಶ್ರೀಗ
ವರು ತಮ್ಮ ಹಸ್ತದಿಂದ ಭಸ್ಮವನ್ನು ಕೊಟ್ಟು ಎಷ್ಟೋ ರೋಗಿಗಳ ರೋ
ನಿವಾರಿಸಿದರು, ಅಂತಃ ಕರುಣದ ಮಂತ್ರದಿಂದ ಗ್ರಹಪೀಡೆಗಳನ್ನು ದೂ
ಮಾಡಿದರು ಮನೆತನದ ಊರ್ಜಿತಾವಸ್ಥೆಗೆ ಶಿವಪೂಜಾವಿಧಿ ವಿಧಾನಗಳನ್ನು ತಿ
ಮನೆ ಮನೆಗಳನ್ನು ಪ್ರತಿಯೊಬ್ಬರ ಮನಗಳನ್ನು ತಿಳಿಗೊಳಿಸಿ ದುಃಖಃ ದುಮ್ಮಾ
ನಗಳನ್ನು ದೂರಮಾಡಿದರು. ವೀರಶೈವ ತತ್ವದ ಶುದ್ಧಾಚರಣೆಯಿಂದ ಜನತೆ
ಧಾರ್ಮಿಕ ನೈತಿಕ ಮಟ್ಟವನ್ನು ಮೇಲ್ಮಟ್ಟಕ್ಕೇರಿಸಿದರು. ಇದೆಲ್ಲ
ಶ್ರೀಗಳವರಿಗೆ ಹೇಗೆ ಹಸ್ತಗತವಾಯಿತೆಂದು ಅಚ್ಚರಿಯಾಗಬಹುದಲ್ಲವೆ!
ಅದೂ ಅವರ ತಪಸ್ಸಿನ ಪ್ರಭಾವ. ಶಿವಪೂಜಾ ಲಿಂಗಾರ್ಚನೆಯ ಅನುಷ್ಠಾ
ಗಳ ಕ್ರಿಯಾಚರಣೆಗಳು ಸಿದ್ಧ ತಾವು ಪ್ರಸಿದ್ಧಿಗೆ ಬರಬೇಕು, ಪವಾಡಗಳಿ

Jangamwadi Math Collection. Digitized by eGangotri

ಪ್ರಸಿದ್ಧರಾಗಬೇಕು ಎಂದು ಅವರೆಂದೂ ಕನಸು ಮನಸಿನಲ್ಲೂ ಕಲ್ಪಿಸಿದವರಲ್ಲ ಪರಿಸ್ಥಿತಿಗನುಸರಿಸಿ ಸೃಷ್ಟಿಯೇ ತಾನಾಗಿ ರೂಪಿಸಲ್ಪಡುತ್ತಿತ್ತು. ಸತತ ಪರಿಶ್ರಮ ಜೀವಿಗಳಾದ ಶ್ರೀಗಳು ಮಠದ ಸೇವಾ ಕಾರ್ಯಕ್ಕೆ ಯಾವ ಮರಿ ಗಳಿಲ್ಲದಿದ್ದರೂ ತಾವೇ ಎಲ್ಲ ಕೆಲಸಮಾಡುತ್ತಿದ್ದರು. ನೋಡಲಾರದೆ ಪುಟ್ಟಮ್ಮ ನವರು ಗಿರಣಿಗೆ ಬೀಸಿಕೊಂಡು ಬರಲಿಕ್ಕೆ ಬಂದಿದ್ದರೆ ಅವ್ವ ಇನ್ನೂ ಬರಲಿಲ್ಲ ವೆಂದು ಕಂದೀಲು ಹಿಡಿದುಕೊಂಡು ಎದುರಿಗೆ ಬರುತ್ತಿದ್ದರಂತೆ. ಅಷ್ಟೊಂದು ವಾತ್ಸಲ್ಯದಿಂದ ಪುಟ್ಟಮ್ಮನನ್ನು ರಕ್ಷಣೆ ಮಾಡುತ್ತಿದ್ದರಂತೆ. ಕಲ್ಲುಬಂಡೆ ಗುಡ್ಡದ ದಿನ್ನೆಗಳಿಂದ ಕೂಡಿದ ಈ ಕಾಡಿನ ಪುಣ್ಯಾಶ್ರಮಸ್ಥಾನ ಬರಬರುತ್ತ ಮರಡಿ ಮಠವೆಂದು ಪ್ರಚಾರದಲ್ಲಿ ಬಂತು ಪ್ರತಿಯೊಬ್ಬರನ್ನು ಆಕರ್ಷಿಸುತ್ತ ಅಚ್ಚು ಮೆಚ್ಚಾಗಿ ಪ್ರಸಿದ್ಧಿಗೆ ಬಂತು.

ಮರಡಿಮಠವೆನ್ನಬೇಕಾದರೆ ಮಠದ ಪಕ್ಕದಲ್ಲಿಯೇ ಬೆಟ್ಟವಿದೆ, ಅದು ಅಷ್ಟೇನು ಎತ್ತರವಿರದಿದ್ದರೂ ದಿನ್ನೆ ಅಥವಾ ಮರಡಿ ಎನ್ನುವಂತಿತ್ತು. ಆ ಬೆಟ್ಟದ ಮೇಲೆ ಬಹುಕಾಲದ ಪುರಾತನ ಲಿಂಗವಿದೆ. ಸೋಮೇಶ್ವರ ಲಿಂಗವೆಂದು ಪ್ರಸಿದ್ಧಿ. ಗುಳೇದಗುಡ್ಡದ ಕೆಲವೊಂದು ಜನರು ನಡೆದು ಕೊಳ್ಳುತ್ತಿದ್ದ ಉದಾಹರಣೆಗಳಿದ್ದವು. ಆ ಮರಡಿಗೆ ಹತ್ತಿರದಲ್ಲಿ ಕಾಡಸಿದ್ಧ ಶ್ರೀಗಳ ಪುಣ್ಯಸ್ಥಳ ನಿರ್ಮಾಣಗೊಂಡು ಮರಡಿಮಠದ ಸ್ವಾಮಿಗಳೆಂದು ಶ್ರೀ ಕಾಡಸಿದ್ಧರು ಪ್ರಸಿದ್ಧಿಗೆ ಬಂದರು. ಮಾನವ ಜೀವಿತದ ಪರಮಗುರಿ ಪೂರ್ಣತ್ವ ವನ್ನು ಸಾಧಿಸುವದು ಸಾಮಾನ್ಯ ಜೀವಿಗಳಿಗೆ ಸುಲಭ ಸಾಧ್ಯವಲ್ಲ, ಆದರಲ್ಲೂ ಜಗತ್ತಿನ ಉದ್ಧಾರಕ್ಕಾಗಿ, ಸಮಾಜದ ಉದ್ಧಾರಕ್ಕಾಗಿ, ಧರ್ಮದ ರಕ್ಷಣೆಗಾಗಿ ದೇವ ಶಕ್ತಿಯೇ ಧರೆಯುಲ್ಲಿಯು ಮಾನವ ರೂಪದ ದಿವ್ಯ ಚೇತನ ತೊಟ್ಟು ದೈವೀ ಕಾರುಣ್ಯದ ವಿಭೂತಿಗಳಾಗಿ ಇಚ್ಛಾಶಕ್ತಿ, ಕ್ರಿಯಾಶಕ್ತಿ ಹಾಗೂ ಜ್ಞಾನ ಶಕ್ತಿ ಈ ಮೂರು ಶಕ್ತಿಗಳ ಸಮುಯನ್ವಯಗೊಳಿಸಿ. ನಿತ್ಯವೂ ಕಾಯಕತತ್ಪರ ರಾದರೆ ಮಾತ್ರ ಪೂರ್ಣತ್ವವನ್ನು ಸಾಧಿಸುವಲ್ಲಿ . ಯಶಸ್ವಿಗಳಾಗಬಲ್ಲರು, ಯಾಕೆಂದರೆ ಒಂದೇ ಶಕ್ತಿಗೆ ಅಧೀನವಾಗಿ ಉಳಿದ ಎರಡು ಶಕ್ತಿಗಳನ್ನು ಉಪೇಕ್ಷಿಸಿದರೆ ಪರಿಪೂರ್ಣತೆಗೆ ಪೋಷಕವಾಗದು. ಇದಕ್ಕನಗುಣವಾಗಿಯೇ ಮರಡಿಮಠದ ಕಾಡಸಿದ್ಧ ಶ್ರೀಗಳು ಭಕ್ತಿಜ್ಞಾನ ಕ್ರಿಯೆ ಈ ಮೂರರಲ್ಲೂ ಮುಕ್ತ ಮನಸ್ಸಿನಿಂದ ಬದಕನ್ನು ಸಾಗಿಸುತ್ತ ಈ ಮಠಕ್ಕೆ ವಿಶಿಷ್ಟವಾದ ಮಹತ್ವವನ್ನು ತಂದುಕೊಟ್ಟರು.

CC-0. Jangamwadi Math Collection. Digitized by eGangotri

ಈ ಮುರಡಿ ಮಠಕ್ಕೆ ಗುಳೇದಗುಡ್ಡದ ತಟ್ಟೀಮಠದ ಬಸಯ್ಯ ನೆಂಬವರು ಬಹಳ ನಂಬಿಗೆಯಿಂದ ನಡೆದುಕೊಳ್ಳುತ್ತಿದ್ದರು. ಅವರು ಅಲ್ಪ ಸ್ವಲ್ಪ ಪಂಚಾಂಗವನ್ನು ನೋಡಿ ಜ್ಯೋತಿಷ್ಯವನ್ನು ಹೇಳುತ್ತಿದ್ದರಂತೆ. ಕಾಡಸಿದ್ಧಶ್ರೀಗಳಿಗೆ ಆಗಾಗ ಬಿನ್ನಹ ಮಾಡಿ ಪ್ರಸಾದ ಕೊಡುತ್ತಿದ್ದರಂತೆ. ತಮ್ಮ ಮನೆತನಕ್ಕೆ ಬೇಕಾಗುವ ಏನೇ ಸಾಮಾನು ತಂದರೂ ಅರ್ಧ ಭಾಗ ಮಾಡಿ ಮಠಕ್ಕೆ ಕಳಿಸುತ್ತಿದ್ದರು. ಒಂದು ದಿನವಾದರೂ ಬುದ್ಧೀ ಎನ್ನದೆ ತಂದೆ ಎಂದೇ ಕರೆಯುತ್ತಿದ್ದರು. ಸಹಜ ಸುಂದರವಾದ ಅಷ್ಟೊಂದು ಬಾಂಧವ್ಯ ಗುರು-ಶಿಷ್ಯರಲ್ಲಿ ಬೆಳೆದು ಬಂದಿತ್ತು. ಅವರಂತೆ ಗುಳೇದಗುಡ್ಡದಲ್ಲಿ ಕಲ್ಲಾಪೂರದ ಶ್ರೀ ಬಸವೇಶ್ವರ ದೇವಸ್ಥಾನದ ಅರ್ಚಕರು ಅಂದರೆ ಪೂಜಾರಿಗಳಾದ ಸೊಲಬಯ್ಯನೆಂಬವರು ನೌಕರಿ ಮಾಡಲಿಕ್ಕೆ ಬ್ಯಾಂಕಿಗೆ ಬಂದಿದ್ದರು. ಅವರು ಮನೆತನದಿಂದ ತೀರಾ ಬಡವರು. ಮನದಲ್ಲಿ ಜಂಗಮ ಪ್ರೇಮಿಗಳು ಅವರ ಧರ್ಮಪತ್ನಿ ಪಾರ್ವತೆಮ್ಮನವರೂ ಗಂಡನ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುವ ಮಹಾ ಪತಿವ್ರತೆ. ಪ್ರತಿ ಸೋಮವಾರಕ್ಕೊಮ್ಮೆ ಶ್ರೀಗಳನ್ನು ಕರೆಯಿಸಿಕೊಂಡು ಪಾದಪೂಜೆಮಾಡಿ ಪ್ರಸಾದ ಕೊಟ್ಟು ಕಳಿಸುತ್ತಿದ್ದರು. ಆಕಸ್ಮಾತ್ ಅವರಿಗೆ ಬ್ಯಾಂಕಿನ ನ್ಯಾಯಬಿದ್ದು ಸೊಲಬಯ್ಯನವರನ್ನು ಗವರ್ನ ಮೆಂಟದವರು ಹಿಡಿದುಕೊಂಡು ಹೋಗಿ ಜೇಲಿನಲ್ಲಿ ಹಾಕಿದರಂತೆ. ಅವರ ಹೆಂಡತಿಯು ಪ್ರತಿಸೋಮವಾರದಂತೆ ಶ್ರೀಗಳವರಿಗೆ ಬಿನ್ನವಿಸಿಕೊಂಡು "ಬುದ್ಧೀ ಜೇಲಿನಲ್ಲಿದ್ದ ಯಜಮಾನರು ನಿರ್ದೋಷಿಗಳಾಗಿ ಬರುವಂತೆ ಆಶೀರ್ವಾದ ಮಾಡಿರೆಂದು" ಬಿಕ್ಕಿ ಬಿಕ್ಕಿ ಅಳುತ್ತಾ ಕೇಳಿಕೊಳ್ಳಲು ಶ್ರೀಗಳು "ಬಿಡವ್ವಾ ಯಾಕೆ ಅಳುತ್ತಿ ; ಇನ್ನು 2–3 ವಾರಗಳಲ್ಲಿ ಅವರಿಗೆ ಯಾವ ಶಿಕ್ಷೆ ಆಗದೆ ನಿರ್ದೋಷಿಗಳಾಗಿ ಬರುತ್ತಾರೆ. ಮತ್ತು ಅವರಿಗೆ ಸರಕಾರದಲ್ಲಿ ದೊಡ್ಡ ನೌಕರಿ ಆಗುತ್ತದೆ." ಎಂದು ಸಂತೈಸಿ ಹೋದರು, ಅದರಂತೆ ತಿಂಗಳೊಳಗಾಗಿ ನಿರ್ದೋಷಿಗಳಾಗಿ ಸೊಲಬಯ್ಯನವರು ಬಂದು 1–2 ತಿಂಗಳಲ್ಲಿ ಸರಕಾರಕ್ಕೆ ಹೆಚ್ಚಿನ ನೌಕರಿಗೆ ಅರ್ಜಿಹಾಕಿದಾಗ ಅದೂ ಕೂಡಾ ಆರ್ಡರ ಬಂದು ಬಿಟ್ಟಿತಂತೆ. ಇದೆಲ್ಲವೂ ಕಾಡಸಿದ್ಧ ಗುರುಗಳ ಮಹಾಕೃಪೆ ಎಂದು ಸೊಲಬ ಯ್ಯನವರು ಕಲ್ಲಾಪೂರಕ್ಕೆ ಹೋದ ವೇಳೆ ಅಮಾವಾಸ್ಯೆಗೊಮ್ಮೆ ಕರೆಸಿಕೊಂಡು ಶ್ರೀಗಳವರಿಗೆ ಯಾವದಕ್ಕೂ ಕೊರತೆಯಾಗದಂತೆ ಶಿವಪೂಜೆ ಮಾಡಿಸುತ್ತಿದ್ದರು ಬರಬರುತ್ತಾ ಪ್ರತಿದಿವಸ ಜಂಗಮರೊಬ್ಬರಿಗೆ ಪ್ರಸಾದದಿಂದ ತೃಪ್ತಿಪಡಿಸುತ್ತ ಜಂಗಮರನ್ನು ತಮ್ಮ ಮನೆಯಲ್ಲಿಟ್ಟುಕೊಂಡು ವಿದ್ಯಾಭ್ಯಾಸ ಕಲಿಸುವ ಖರ್ಚ

CC-0. Jangamwadi Math Collection. Digitized by eGangotri

ಕೊಡಹತ್ತಿದರು. ಆ ಪದ್ಧತಿಯು ಅವರ ಮನೆಯಲ್ಲಿ ಇಂದಿಗೂ ನಡೆಯುತ್ತ ಬಂದಿದೆ. ಅತೀ ಬಡತನದಲ್ಲಿದ್ದವರು ಎರಡೇ ಎಕರೆ ಜಮೀನಿದ್ದವರು ಈಗ ಇಪ್ಪತ್ತು ಕೂರಿಗೆ ಜಮೀನು ಹೊಂದಿ ಲಕ್ಷಾಧೀಶರಾಗಿದ್ದಾರೆ. ಇದೆಲ್ಲಾ ಏತರ ಮಹಿಮೆ? ಕಾಡಸಿದ್ಧಶ್ರೀಗಳ ಆಶೀರ್ವಾದ ಮತ್ತು ಜಂಗಮದಾಸೋಹದ ಬೆಂಬಲ. ಅದಕ್ಕೆಂದೇ ಸರ್ವಜ್ಞ ಕೂಡಾ "ಹತ್ತುಸಾವಿರ ಜನಕೆ ನೀಡಿ ದಣಿಯಲು ಬೇಡ ತತ್ವಬಲ್ಲ ಶಿವಯೋಗಿಗೆ ತುತ್ತು ಪ್ರಸಾದವನ್ನಿತ್ತರೆ ಕೈಲಾಸ ಒತ್ತಿ ಬೀಳುವದು ಸರ್ವಜ್ಞ" ಎಷ್ಟೊಂದು ಮಾರ್ಮಿಕವಾಗಿ ಹೇಳಿದ್ದಾನೆ ಅಲ್ಲವೆ ? ಚಿಕ್ಕಂದಿನಲ್ಲಿ ಓದುಬರಹಕ್ಕೆ ಅಕ್ಷರಶತ್ರುವೆಂದು ಹೀಯಾಳಿಸಿದ ಹೆತ್ತವರು ಈಗಿನ ಪರಿಸ್ಥಿತಿಯನ್ನು ಕಂಡಿದ್ದರೆ ಎಷ್ಟೊಂದು ತೃಪ್ತಿ ಪಡುತ್ತಿದ್ದರೋ ಏನೋ, ಮನುಷ್ಯನಿಗೆ ತಿಳುವಳಿಕೆಯ ಮೆಟ್ಟಿಲನ್ನು ಹತ್ತುತ್ತ ಹೋದ ಹಾಗೆ ಜಗತ್ತು ಅಂದರೇನು ? ನಾನೆಂಬುದೇನು ? ಜಗತ್ತು ನನಗೇನು ? ನಾನು ಜಗತ್ತಿಗೇನು ? ಎಂಬ ಜಟಿಲವಾದ ಪ್ರಶ್ನೆಗಳನ್ನು ಪ್ರಕೃತಿ ಅಂತರಂಗದಲ್ಲಿ ನೆಡುತ್ತಾಳೆ. ತಕ್ಕ ಸಮಾಧಾನದ ಉತ್ತರ ದೊರೆಯುವ ವರೆಗೂ ಅದೃಷ್ಟ ಹುಡುಗಾಟದ ಹುಚ್ಚುಹಾರಾಟಕ್ಕೆ ಸಿಕ್ಕು ಜೀವನದ ಅರ್ಥ ತಿಳಿಯದೇ ತನ್ನ ವಿಮೋಚನೆಯ ಮಾರ್ಗ ನಿರೀಕ್ಷಿಸದೇ ವ್ಯರ್ಥವಾಗಿ ಸಾಯುತ್ತಾನಲ್ಲದೇ ಸಾರ್ಥಕತೆ ಹೊಂದುವದಿಲ್ಲ. ಆಯುಷ್ಯ ಪ್ರಮಾಣಕ್ಕೆ ಮಿತಿ ಎಂಬುದಿದೆ ಚಿಂತೆ ವ್ಯಸನಗಳಿಗೆ ಮಿತಿಯೇ ಇಲ್ಲ, ಆಶೆ ಆಕಾಂಕ್ಷೆಗಳಿಗೆ ಕೊನೆಯೆಂಬುದೇ ಇಲ್ಲ ಮೃತ್ಯುವನ್ನೂ, ಅದೃಷ್ಟವನ್ನೂ ಹಿಡಿದಾಡಿಸಬೇಕೆಂಬ ಹಟವಾದಿಗಳೆಲ್ಲ ಹಣ್ಣುಹಣ್ಣಾಗಿದ್ದಾರೆ, ಆದರೆ ಹೇಗೆ ಎದುರಿಸಬೇಕೆಂದು ಕಲಿಯಲು ಕೊನೆಯ ವರೆಗೂ ಜಿಜ್ಞಾಸೆ ಪಡುವವರಿಗೆ ಅದೃಷ್ಟ ಸಹಾಯ ನೀಡಿದೆ. ಮೃತ್ಯು ಸಹ ದೂರಾದ ಉದಾಹರಣೆಗಳು ಶರಣರ ಜೀವನದ ವೃತ್ತಾಂತಗಳಲ್ಲಿ ನಾವು ಕಾಣಬಹುದು.

ಕಾಡಸಿದ್ಧ ಶ್ರೀಗಳು ಸ್ವತಃ ಎರಡು ಕೊಡ ಹೊತ್ತು ನೀರು ತರುವದು, ಶಿವಪೂಜೆಗೆ ಹೂ ಪತ್ರಿಗಳನ್ನು ತಾವೇ ತರುವದು, ಕಸಗೂಡಿಸುವದು, ಸಂತೆಗೆ ಹೋಗಿ ಪ್ರಸಾದಕ್ಕೆ ಬೇಕಾಗುವದನ್ನು ತರುವದು. ಹೀಗೆ ಸಾಗಿಸುತ್ತಿದ್ದ ಅವರ ಬದುಕನ್ನು ಕಂಡರೆ ಶ್ರೀಗಳವರಿಗೆ ಕಾಯಕದಲ್ಲಿ ಎಷ್ಟೊಂದು ನಿಷ್ಠೆ ಇತ್ತೆಂದು ವ್ಯಕ್ತವಾಗುತ್ತದೆ. ಅವರೆಂದೂ ಸೋಮಾರಿಗಳಾಗಿ ಇರುತ್ತಿರಲಿಲ್ಲ. ಅವರು ಇತರರಂತೆ ಕೂಡ್ರುತ್ತಿದ್ದಿಲ್ಲ. ವೈಗಳರೀತೆ

CC-0. Jangamwadi Math Collection. Digitized by eGangotri

ಹೊತ್ತುಗಳೆದವರೂ ಅಲ್ಲ. ಉನ್ನತ ವೈರಾಗ್ಯದ ಉತ್ಕರ್ಷ ಬದುಕಿ
ಇತಿಹಾಸ ಕಂಡು ಕೇಳಿದವರಿಗೆ ರೋಮಾಂಚನವೆನಿಸುತ್ತಿತ್ತು "ಬ್ರಹ್ಮಪದ
ವಾಗಿದೆಯೆಂದು ಬ್ರಹ್ಮದೊಡನೆ ಧಿಕ್ಕರಿಸಬೇಡ, ಶಿವಜ್ಞಾನ ದೀಪ್ತಿಯಾಯಿತೆಂದು
ಶಿವಶರಣರನ್ನು ಧಿಕ್ಕರಿಸಬೇಡ, ಕರ್ಮ ಜ್ಞಾನವಾಗಿದೆಯೆಂದು ಕರ್ಮ
ಹಳಿಯಬೇಡ ಇದು ಕಾರಣ ಕೂಡಲಸಂಗಯ್ಯಾ ಸಾಕ್ಷಿಯಾಗಿ ಇವರೆಲ್ಲರ
ಸಜ್ಜನ ಶುದ್ಧ ಶಿವಾಚಾರಕ್ಕೆ ಹೊರಗು" ಎಂಬ ವಚನದಂತೆ ಜ್ಞಾನದಾ
ಯೆಂದು ಕ್ರಿಯಾರಹಿತರಾಗುತ್ತಿರಲಿಲ್ಲ. ಜ್ಞಾನಕ್ರಿಯೆಗಳ ಸಮುಚ್ಚಯ ಪದ
ನಿಜಅರ್ಥದಂತೆ ಆಚರಣೆಯುಳ್ಳವರಾಗಿದ್ದರು. ಮಠದಲ್ಲಿ ಒಂದು ಆಕಳ
ಸಾಕಿದ್ದರು ಅದನ್ನು ತಾವೇ ಮೇಯಿಸುತ್ತಿದ್ದರು. ಅದಕ್ಕೆ ಗೌರಿ ಎಂದು
ಹೆಸರಿಟ್ಟಿದ್ದರು ಶ್ರೀಗಳವರು ಎಲ್ಲಿಯೋ ನಿಂತು ಗೌರಿ ಎಂದು ಕೂಗಿದರೆ ಸಾಕು
ಓಗೊಡುತ್ತ ಧಾವಿಸಿ ಬರುತ್ತಿತ್ತಂತೆ. ಒಂದು ನಾಯಿಗೆ ಕೂಡಾ ಲಿಂಗಧಾರಣೆ
ಮಾಡಿದ್ದರಂತೆ ಅದು ಪ್ರತಿದಿನ ಮುಂಜಾನೆ ಸ್ನಾನ ಮಾಡಿ ಶ್ರೀಗಳವರ ಪಾದ
ಸ್ಪರ್ಶ ಮಾಡಿಕೊಳ್ಳದೇ ಆಹಾರವನ್ನೇ ತಿನ್ನುತ್ತಿರಲಿಲ್ಲವಂತೆ. ಪಶುಗಳಲ್ಲಿ
ಕೂಡಾ ಪ್ರಜ್ಞೆಯನ್ನು ಜಾಗೃತಗೊಳಿಸಿದ ಶ್ರೀ ಕಾಡಸಿದ್ಧರು ನಿಜವಾಗಿಯೂ
ಲೋಕ ಪ್ರಸಿದ್ಧ ಮಹಾತ್ಮರು ಮಹರ್ಷಿಗಳು. ಮಠದ ಯಾವ ಕೆಲಸಗಳನ್ನೂ
ತಿಮ್ಮಸಾಗರದ ಭಕ್ತರು ವಿಶ್ವಾಸದಿಂದ ಮಾಡುತ್ತಿದ್ದರು. ಪ್ರಸಾದಿ ಸ್ಥಲದ
ಅನುಗ್ರಹವಾಗಿದ್ದ ಸಂಗಪ್ಪ ಕೋರಿ ಎಂಬವರು ಶ್ರೀಗಳನ್ನು ತಿಮ್ಮಸಾಗರಕ್ಕೆ
ಕರೆಯಿಸಿಕೊಂಡು ಶಿವಪೂಜೆ ಮಾಡಿ ಕಳಿಸುತ್ತಿದ್ದರು. ಮಠದಲ್ಲಿ ಭಾವಿ ಇದ್ದಿರ
ಲಿಲ್ಲ ಪ್ರತಿನಿತ್ಯ ತಮಗೆ ಬೇಕಾಗುವ ನೀರನ್ನು ಎರಡನೆಯವರ ಜಾಗೆಯಲ್ಲಿದ್ದ
ಭಾವಿಗೆ ಹೋಗಿ ತರುತ್ತಿದ್ದರು. ನಿತ್ಯದಂತೆ ಒಂದು ದಿನ ಜೋಡುಕೊಡ
ಹೊತ್ತು ನೀರು ತರುವಾಗ ಒಬ್ಬ ಕುಹಕಿಯು ಬೇರೊಬ್ಬರ ಜಾಗೆಯಿಂದ
ನೀರು ಹೊತ್ತು ಕಂಟಲಿ ಎತ್ತು ಹೇಗೆ ಹೋಗುತ್ತಿದೆ ನೋಡಿ ಎಂದ ಘಟ್ಟಿಯಾಗಿ
ನುಡಿದನಂತೆ ಮನಸ್ಸಿಗೆ ತಾಪವಾಗಿ ತತ್ತರಿಸುತ್ತ ಬಂದವರೇ ಕೊಡವನ್ನಿಟ್ಟು
"ಅವ್ವಾ ಅವ್ವಾ ಬಾ ಇಲ್ಲಿ" ಎಂದು ಬಯಲಿನಲ್ಲಿ ಕುಳಿತು "ನೋಡವ್ವ
ನಾನೇನು ತಪ್ಪು ಮಾಡಿದನೆಂದು ಶಿವನು ಈ ರೀತಿ ನುಡಿಸಿದಾ ನೋಡವ್ವಾ
ಕೊಡಹೊತ್ತುಕೊಂಡು ಬರುವಾಗ ಯಾರೋ ನನಗೆ ಬೇರೊಬ್ಬರ ಜಾಗೆಯಿಂದ
ನೀರು ಹೊತ್ತು ಕಂಟಲಿ ಎತ್ತು ಹೇಗೆ ಹೋಗುತ್ತದೆ ನೋಡಿ ಎಂದು ಘಟ್ಟಿ
ಯಾಗಿ ನುಡಿದನವ್ವಾ" ಎಂದು ಹೇಳುತ್ತ ಮೈಯೆಲ್ಲಾ ಬೆವರು ತುಂಬಿ

CC-0. Jangamwadi Math Collection. Digitized by eGangotri

ಹೃದಯ ತಳಮಳವಾಗಿ ಬೆವರಿನ ಹನಿಗಳು ಭೂಮಿಯ ಮೇಲೆ ಸಿಟ್ಟುಸಿರಿ ನೊಂದಿಗೆ ಬೀಳಹತ್ತಿದವಂತೆ. ಪುಟ್ಟಮ್ಮನವರು "ಇರಲಿಬಿಡಪ್ಪಾ ನಿಂದಕರ ನುಡಿಗೆ ನೀನೇಕೆ ಕಿವಿಯೊಡ್ಡಿ ತಾಪಗೊಳ್ಳುತ್ತೀ ನಿನಗೆ ತಿಳಿಹೇಳುವದು ನನ್ನಿಂದ ಸಾಧ್ಯವೇನಪ್ಪಾ ಬಾ, ಬಾ ಶಿವಪೂಜೆಗೆ ಹೊತ್ತಾಗಿದೆ." ಎಂದು ಎಷ್ಟು ಪರಿಪರಿಯಿಂದ ಹೇಳಿದರೂ ಅವರ ಕಳವಳ ನಿಂತಿರಲಿಲ್ಲ. ನಿಂದೆಯ ನೋವು ಹೃದ್ಭಾಂಡದಲ್ಲಿ ಹೊಕ್ಕು ಅವರ ಸದೃಢಶರೀರ ಕಂಪನ ಹೊಂದಿ ಭೂಕಂಪನದ ಲಾವಾರಸ ಹೊರಬಂದಂತೆ ಮೈತುಂಬಾ ಬೆವರು ಹರಿದು ಭೂಮಿಗೆ ಸ್ಪರ್ಶವಾಯ್ತು ಥಟ್ಟನೇ ''ಅವ್ವಾ ! ಇನ್ನು ಎರಡನೇಯವರ ಜಾಗೆಯಲ್ಲಿ ಬಾವಿ ನೀರಿಗೆ ನಾನು ಹೋಗಲಾರೆ ನನ್ನ ಮೈ ಬೆವರು ಬಿದ್ದ ಈ ಸ್ಥಾನದಲ್ಲಿ ಈ ಮಠದಲ್ಲಿ ಶಿವಪೂಜೆಗೆ ಲಿಂಗಾರ್ಚನೆಗಾಗಿ ನಾನೇ ಒಂದು ಬಾವಿಯನ್ನು ತೆಗೆಯುತ್ತೇನೆ" ಎಂದರು. ಆಗ ಪುಟ್ಟಮ್ಮನವರು "ಎಂಥಾ ಯೋಚನೆ ನನ್ನಪ್ಪಾ ಹೇಳಿ ಕೇಳಿ ಇದು ಗುಡ್ಡಗಾಡು ಸ್ಥಳ. ಕಲ್ಲುಬಂಡೆಗಳಿಂದ ಕಠಿಣವಾಗಿದ್ದ ಈ ಜಾಗೆಯಲ್ಲಿ ಭಾವಿ ತೆಗೆಯುತ್ತೇನೆ ಅನ್ನುವಿರಲ್ಲಾ. ಭಾವೀ ತೆಗೆಯಿಸಲಿಕ್ಕೆ ಕೈತುಂಬಾ ಹಣಾ ಬೇಕು ನನ್ನಪ್ಪಾ" ಎನ್ನಲು "ನಾವು ಯಾರಿಂದಲೂ ತೆಗೆಸುವದು ಬೇಡಾ ತಾಯಿ ಶಿವನು ನನಗೆ ಸದೃಢವಾದ ಶರೀರ ಕೊಟ್ಟಿದ್ದಾನೆ, ಸ್ವತಃ ನೀರು ಬೀಳುವ ತನಕ ನಾನೊಬ್ಬನೇ ಈ ಭೂಮಿ ಯನ್ನು ಅಗಿಯುತ್ತೇನೆ. ಎರಡನೇಯವರ ಭಾವಿಗೆ ಏಕವ್ವಾ ಹೋಗುವದು" ಗುರುವಿನ ಕೃಪೆಯಿದ್ದರೆ ಬೆಟ್ಟದ ನೆತ್ತಿಯನ್ನು ಅಗಿದು ನೀರು ತರಿಸಿದ ಶ್ರೀ ಗುರುವಿನ ಕರುಣೆ ಇದ್ದರೆ ಗಂಗಾ ಮಾತೆ ಕುಣಿಕುಣಿದು ಬರುತ್ತಾಳೆ ನೀನೇನು ಚಿಂತಿಸಬೇಡವ್ವಾ" ಎಂದು ಹೇಳಲು ಪುಟ್ಟಮ್ಮ ತಾಯಿ ನಿರುಪಾಯಳಾಗಿ ಸುಮ್ಮನಾದಳು. ಮರುದಿವಸವೇ ಮನಃಪೂರ್ವಕ ಪೂಜೆ ಮಾಡಿ ಭೂಮಿ ಯನ್ನು ಅಗಿಯಹತ್ತಿದರು, ಒಬ್ಬರೇ ಕಡಿಯುವದು ಒಬ್ಬರೇ ಮಣ್ಣು ಹೊತ್ತು ಹಾಕುವದು ಛೇ ಎಂಥ ಹಟ ಯೋಗಿಗಳು, ಒಂದು ತಿಂಗಳ ಗತಿಸುವಷ್ಟರಲ್ಲಿ ಇಪ್ಪತ್ತು ಫೂಟಿನಷ್ಟು ಅಂದಾಜ ಒಳಗೆ ಸರಿದಿರಬೇಕು. ಒಂದು ದಿವಸ ಪಟ್ಟ ಶಿಷ್ಯರಾದ ಗುಳೇದಗುಡ್ಡದ ತಟ್ಟೀಮಠದ ಬಸಯ್ಯನವರು ಅಣ್ಣಿಗೇರಿ ಹುಚ್ಚಪ್ಪನವರು ಕೂಡಿ ಬಂದು ಶ್ರೀಗಳವರಿಗೆ ನಮಸ್ಕರಿಸಿ "ಬುದ್ಧಿ ಇದನ್ನೇನು ನಡಿಸಿರುವಿರಿ, ಕಠಿಣವಾದ ಕಲ್ಲಿನ ಬಂಡೆಗಳ ಜಾಗೆ ಇದು ಭಾವಿ ತೆಗೆಯಬೇಕೆಂಬ ಇಚ್ಛೆ ತಮಗಿದ್ದರೆ ಬೇರೊಂದು ಜಾಗೆಯಾಗಿದ್ದರೆ ಒಳ್ಳೆಯ

CC-0. Jangamwadi Math Collection. Digitized by eGangotri

ದಿತ್ತು" ಎನ್ನಲು ಶ್ರೀಗಳು "ನೋಡ್ರಿ ಬಸಯ್ಯನವರೇ ನಾವು ಮೊದಲೇ ಕಾಡುವಮನುಷ್ಯರು ಅದಕ್ಕಾಗಿ ನಮ್ಮ ಪೀಠಕ್ಕೆ ಕಾಡಸಿದ್ಧರ ಮಠಾ ಅಂತಾರಾ ಅಷ್ಟೊಂದು ನಾವ್ಯಾಕ ನೋಡ್ತೊನ್ರಪಾ ಶಿವನ ಕರುಣೆ ಗುರುಕೃಪಾ ಇದ್ದರ ಇನ್ನು 3-4 ತಿಂಗಳ ನಾವು ಪ್ರಯತ್ನಾ ಮಾಡಿದರ ಇಲ್ಲೇ ನೀರು ಬೀಳ್ತಾವು ನೋಡ್ರಿ ಮತ್ತೆ ಮೊದಲೇ ನೀವು ಪಂಚಾಂಗ ಬೇರೆ ನೋಡ್ತೀರಿ ನಾವು ಮುಹೂರ್ತಾ ನೋಡಿಲ್ಲಾ ವ್ಯಾಳೆ ನೋಡಿಲ್ಲಾ ಎಲ್ಲಾನು ಶಿವನ ಮ್ಯಾಗ ಹಾಕಿ ಸುರು ಮಾಡಿವಿ ಕಾಯಿಕಾ. ಈಗಾದ್ರೂ ಹೇಳ್ರಿ ನೀವು ನೀರು ಬೀಳ್ತಾವೊ ಇಲ್ಲೋ" ಎನ್ನಲು ಬಸಯ್ಯನವರು "ಬುದ್ಧಿ ನಾವು ಪುಸ್ತಕದ ಜ್ಞಾನದವರು. ನೀವು ಮಸ್ತಕದ ಜ್ಞಾನದವರು, ನಾವು ಕಂಠಪಾಠ ಮಾಡಿದವರು, ನೀವು ಸಿದ್ಧಹಸ್ತರು, ಜಗತ್ತನ್ನೇ ಉದ್ಧರಿಸಬಲ್ಲ ನಿಮ್ಮ ಅಮೃತ ಹಸ್ತ ಸ್ಪರ್ಶವಾದ ಮೇಲೆ ಕೇಳುವದೇನು ಶ್ರೀಗಳೊಪ್ಪತ್ತಿನಲ್ಲಿ ಗಂಗಾ ಮಾತೆ ಸವಿತುಂಗೆಯಾಗಿ ಬರುತ್ತಾಳೆ ನೀವೇನು ಯೋಚಿಸಬೇಡಿ" ಎಂದರು, "ಆಗಲ್ರಪಾ ನೀರು ಬಿದ್ದ ತಕ್ಷಣ ಮರಡಿಯ ಮೇಲಿದ್ದ ಸೋಮನಾಥ ದೇವಾಲಯಕ್ಕೆ ಹೋಗಿ ಅಭಿಷೇಕ ಮಾಡಿರಿ ಮತ್ತು ಕೋಟಿಕಲ್ಲಿಗೆ ಹೋಗಿ ಶ್ರೀ ಹುಚ್ಚೇಶ್ವರರ ಕರ್ತೃ ಗದ್ದಿಗೆಗೆ ಅಭಿಷೇಕ ಮಾಡಿರಿ" ಎಂದರು ಅದಕ್ಕೆ ಅವರಿಬ್ಬರೂ ಒಪ್ಪಿಕೊಂಡರು ದೈವಿ ಚಮತ್ಕಾರವೆಂತಹದೋ ಶ್ರೀಗಳ ಕಠಿಣ ಕಾಯಕದ ಪರಿಶ್ರಮಕ್ಕೆ ಬಂಡೆ ಗಲ್ಲುಗಳು ಬಿಚ್ಚುತ್ತ ನೀಳವಾಗಿ ಆಳವಾಗಿ ಭೂಮಿ ಬಿರಿಯುತ್ತ ನಾಲ್ಕನೇ ದಿನದಲ್ಲಿ ಗಂಗಾ ಮಾತೆ ಬಂದಳು ಶ್ರೀಗಳು ಹರ್ಷಚಿತ್ತರಾಗಿ ಬಸಯ್ಯನವರನ್ನು ಹುಚ್ಚಪ್ಪನವರನ್ನು ಕರೆಕಳುಹಿಸಿ, ಮರಡಿಯ ಸೋಮನಾಥನಿಗೂ ಶ್ರೀ ಹುಚ್ಚೇಶ್ವರರ ಕರ್ತೃ ಗದ್ದಿಗೆಗೂ ಅಭಿಷೇಕ ಮಾಡಿಸಿದರು. ಈ ಅಘಟಿತ ದೈವಿ ಚಮತ್ಕಾರದಿಂದ ಕಾಡಸಿದ್ಧರ ಮಠದ ಮೇಲೆ ಮತ್ತು ಶ್ರೀಗಳವರ ಮೇಲೆ ಗುಳೇದಗುಡ್ಡದ ಭಕ್ತರ ವಿಶ್ವಾಸವು ಪರಿಪೂರ್ಣವಾಗಿ ನೆಲೆಗೊಂಡಿತು. ಈ ರೀತಿಯ ಪವಾಡದಿಂದ ಜನರನ್ನು ಆಕರ್ಷಿಸಬೇಕೆಂದು ಶ್ರೀಗಳು ಕಲ್ಪಿಸಿದ್ದರೆ ? ಇಲ್ಲಾ ಖಂಡಿತಾ ಇಲ್ಲ, ಶರಣರು ಯಾರೊಬ್ಬರ ಆಶ್ರಯಕ್ಕೂ ಕೈ ಚಾಚದ ಧೀರರು ಮತ್ತೊಬ್ಬರ ಹಂಗಿಲ್ಲದೇ ಲಿಂಗಸಂಗಿಗಳಾದ ಸ್ವತಂತ್ರ ಪುರುಷರು, ಅಂತೇ ಧ್ಯೇಯ ಸಾಧಿಸುವ ಸಾಧಕರು ನಿರಪೇಕ್ಷ ಬುದ್ಧಿಯಿಂದ ಯಾವ ಕ್ಷೇತ್ರದಲ್ಲಿ ದುಡಿದರೂ ಶ್ರೇಯಸ್ಸು ಸಾಧ್ಯವೆಂದು ಶ್ರೀಗಳವರ ಜೀವನ ಚರಿತ್ರೆಯಿಂದ ತಿಳಿದುಕೊಳ್ಳಬಹುದು

ಅವರಲ್ಲಿ ಯಾವಾಗಲೂ ಧೈರ್ಯ ಸಾಹಸಗಳನ್ನು ಹಿಡಿದೆಬ್ಬಿಸುವ

CC-0. Jangamwadi Math Collection. Digitized by eGangotri

ಕತೃತ್ವ ಶಕ್ತಿ ಹಸ್ತಗತವಾಗಿತ್ತು. ಸತ್ಯ ಶುದ್ಧ ಕಾಯಕದಿಂದ ಭಕ್ತಿಯು ವಿಶಾಲ ಹೃದಯಿಗಳಾಗಿ ಶಕ್ತಿಮೀರಿ ಪರಿಶ್ರಮಿಸುವ ಕಠೋರ ಜೀವಿಗಳು ಶ್ರೀಗಳು ಲೋಕಾನುಭವದ ಆಡುಭಾಷೆಯು ಸರಸ ಸುಮಧುರವಾದ ವಾಕ್ಯಗಳು. ಭವದ ಬೇರನ್ನು ಕೊಗೆಯುವ ಹರಿತಾದ ಆಯುಧಕ್ಕಿಂತಲೂ ಹರಿತವಾಗಿತು ತ್ತಿದ್ದವು ಶಬ್ದಗಳು ಇದ್ದುದನ್ನು ಇದ್ದಕ್ಕಿದ್ದಂತೆ ಮಾತನಾಡುವ ದಿಟ್ಟತನದ ಕಲೆ ಬೆರೆತು ಬಂದಿತ್ತು. ವಿರಕ್ತರ ಹೃದಯ ವ್ಯಕ್ತಪಡಿಸಲು ಜನರು ನಾನಾ ರೀತಿಯಾಗಿ ಪರೀಕ್ಷಿಸುವರು. ಪರೀಕ್ಷೆಯಲ್ಲಿ ತೇರ್ಗಡೆಯಾದರೆ ಮಾತ್ರ ಅವರ ಬದುಕು ಬಂಗಾರವಾಗುವದು, ಇಲ್ಲವಾದರೆ ಅವರ ಬದುಕೇ ರಸಾತಳಕ್ಕಿಳಿದು ಹೇಳ ಹೆಸರಿಲ್ಲದಂತಾಗುವದು. ಶ್ರೀಗಳ ಮಠಕ್ಕೆ ತಟ್ಟೀವಕಟದ ಬಸಯ್ಯನವ ರೊಂದಿಗೆ ಶರಣಪ್ಪ ಬಿಂಜವಾಡಿಗಿ ಎಂಬ ಮುಸಾಲಿ ವ್ಯಾಪಾರಸ್ಥನೊಬ್ಬನು ಬಸಯ್ಯನವರ ಒತ್ತಾಯಕ್ಕೆ ಆಗಾಗ ಬರುತ್ತಿದ್ದನು. ಅವನಿಗೆ ಸ್ವಾಮಿಗಳು ಜಂಗಮರು ಶಿವಪೂಜೆ ಲಿಂಗಾರ್ಚನೆ ಇತ್ಯಾದಿ ಧಾರ್ಮಿಕ ವಿಧಿಗಳೆಂದರೆ ತೀರಾ ತಿರಸ್ಕಾರ ಭಾವನೆಯುಳ್ಳವನಿದ್ದನು. ಮೇಲಾಗಿ ಉಡಾಳರ ಗೆಳತನ ಬೇರೆ. ಆದರೂ ಇದ್ದುದನ್ನು ಇದ್ದಂತೆಯೇ ನೇರವಾಗಿ ಮಾತನಾಡುವ ನೀಟಾದ ವ್ಯಕ್ತಿ. ಮನೆತನದಿಂದ ಬಡವ ದಾಂಪತ್ಯ ಜೀವನದಲ್ಲಿ ಒಂದು ಹೆಣ್ಣು ಮಗು ಹುಟ್ಟಿದ ಬಳಿಕ ಅವರ ಧರ್ಮಪತ್ನಿಯಾದ ಅಮರಮ್ಮನಿಗೆ ವಿಚಿತ್ರವಾದ ಕಾಯಿಲೆ ಅಂದರೆ ಹೆಣ್ಣುಮಕ್ಕಳ ರೋಗ ಹುಟ್ಟಿ ಯಾವ ಡಾಕ್ಟರಿಗೆ ತೋರಿಸಿದರೂ ಗುಣವಾಗಲಿಲ್ಲವಂತೆ. ಕೆಲವು ಜನರು "ನೋಡಪ್ಪ ; ಸತ್ಪುರುಷರನ್ನು ಮನೆಗೆ ಕರೆಯಿಸಿ ಅವರ ಪಾದಪೂಜೆ ಮಾಡಿಸಬಾರದೆ" ಎಂದರೆ "ಸತ್ಪುರುಷರು ಈ ಕಾಲದಲ್ಲಿ ಎಲ್ಲಿ ಬರಬೇಕ್ರಿ, ಇದು ಕಲಿಕಾಲ ಸತ್ಪುರುಷರ ಹೆಸರು ಹೇಳಿ ಜನರನ್ನು ಸುಲಿಯುವ ಢಂಬಾಚಾರಿಗಳ ಕಾಲ" ಎಂದು ಹೇಳಿ ಸುಮ್ಮನಿದ್ದು ಬಿಡುತ್ತಿದ್ದನಂತೆ ಪಾಪ ; ನಿಷ್ಠುರ ಸತ್ಯದ ಬಡವನ ಸ್ವಾಭಿಮಾನದ ನುಡಿಗಳು ಕೆಲವರಿಗೆ ದುರಭಿಮಾನವಾಗಿ ಕಾಣುವದೂ ಸ್ವಾಭಾವಿಕ. ಸ್ವಾಮಿಗಳು ವಿರಕ್ತರು ತಪಸ್ವಿಗಳು ಎಲ್ಲರೂ ತಮ್ಮ ಹೊಟ್ಟೆ ತುಂಬಿಸಿಕೊಳ್ಳುವ ಸ್ವಾರ್ಥಿಗಳೆಂದೇ ಅವನ ಭಾವನೆ ನಮ್ಮ ದೇಶದಲ್ಲಿ ಎಷ್ಟೋ ಜನ ಸಾಮಾನ್ಯರು ಹೊಟ್ಟೆಬಟ್ಟೆಗಿಲ್ಲದೇ ಬಡತನದ ನಿಟ್ಟುಸಿರಿನ ಜ್ವಾಲೆಯಲ್ಲಿ ಸಾಯುವ ಸ್ಥಿತಿಯಲ್ಲಿದ್ದ ಒಂದು ಕಾಲವಿದೆ. ಆದರೆ ಹೊಟ್ಟೆಗೆ ಸಿಕ್ಕಿದ್ದನ್ನೆಲ್ಲಾ ಸಿಕ್ಕಂತೆ ತಿಂದು ಬಟ್ಟೆ ಬರೆಗಳಿಂದ ತಮ್ಮ ಶ್ರೀಮಂತಿಕೆಯ

CC-0. Jangamwadi Math Collection. Digitized by eGangotri

ಅಟ್ಟಹಾಸದಲ್ಲಿ ಅಜೀರ್ಣದಿಂದ ಬೆಳೆದ ವಿಚಿತ್ರವಾದ ದೇಹ ಕಾಯಿಲೆಯಿಂದ

ಸಾಯುತ್ತಿರುವ ಮತ್ತೊಂದು ಕುಲವಿದೆ. ಮುಂದುವರಿದ ಇಂದಿನ ವಿಜ್ಞಾನ ಜಗತ್ತಿನಲ್ಲಿ ಬಡವರದೊಂದು ಕುಲ, ಶ್ರೀಮಂತರದೊಂದು ಕುಲವೆಂದು ಹೇಳಿದರೆ ತಪ್ಪಾಗದು. ಗೊಂದಲಮಯ ಇಂಥ ಸಾಮಾಜಿಕ ಜೀವನಕ್ಕೆ ಸಮಾನ ತಳಹದಿಯ ತತ್ವಬೋಧೆಯನ್ನಿತ್ತು ಸರ್ವಾಂಗೀನಕ್ಕೆ ಪ್ರಗತಿಗೆ ಪ್ರಯತ್ನಿಸಿದ ವೀರಶೈವ ಧರ್ಮ ಪ್ರಕಾಶಕರು ನಿಜವಾಗಿಯೂ ಪ್ರಾತಃ ಸ್ಮರಣೀಯರು, ಲೋಕವಂದ್ಯರು ಬಡತನದಲ್ಲಿಯೇ ಕಾಲ ಕಳೆಯುತ್ತ ನಿಜವಾದ ಧಾರ್ಮಿಕ ಆಚಾರ ವಿಚಾರಗಳ ಸಂಸ್ಕಾರವಿಲ್ಲದೆ ತನ್ನ ಹೆಂಡತಿಗೆ ಅಂಟಿಕೊಂಡ ಕಾಯಿಲೆಗೆ ಶರಣಪ್ಪನವರು ಮೂಕ ವೇದನೆಯನ್ನನುಭವಿಸುತ್ತ ಮಂತ್ರಗಾರರಿಗೆ ಜೋತಿಷ್ಯ ಹೇಳಬಲ್ಲವರಿಗೆ ವೈದ್ಯಗಾರರಿಗೆ ಸಾಕಷ್ಟು ಹಣ ವೆಚ್ಚ ಮಾಡಿದರೂ ಆ ತಾಯಿಯ ಕಾಯಿಲೆ ಮತ್ತಷ್ಟು ಬಲವಾಗುತ್ತಲೇ ಇತ್ತು. ಚಿಂತಾಗ್ರಸ್ತರಾದ ಆ ತಾಯಿಯ ತವರು ಮನೆಯವರು ಶರಣಪ್ಪ ನವರಿಗೆ ಮಹಾ ತಪಸ್ವಿಗಳಾದ ಗುರುಗಳನ್ನು ನೀವು ಮನೆಯಲ್ಲಿ ಕರೆಯಿಸಿ ಪಾದಪೂಜೆಮಾಡದೇ ಗತ್ಯಂತರವಿಲ್ಲವೆಂಧು ಹೇಳಿದರಂತೆ. ಕೈ ಸೋತು ಹಣ್ಣಾಗಿದ್ದ ಶರಣಪ್ಪನು ದಾರಿ ಕಾಣದೆ ಬಸಯ್ಯನವರಿಗೆ ಮೊರೆಹೊಕ್ಕು ಕಾಡಸಿದ್ಧರ ಹತ್ತಿರ ಅವರನ್ನೆ ಮುಂದುಮಾಡಿದನಂತೆ ಬಸಯ್ಯನವರು "ಬುದ್ಧೀ ಒಬ್ಬ ಉಡಾಳ ಶಿಷ್ಯನು ತನ್ನ ಮನೆಗೆ ಕರೆದು ಕೊಂಡು ಹೋಗಲು ಬಿನ್ನವಿಸಿದ್ದಾನೆ ತಾವು ದಯಮಾಡಿಸುವಿರಾ" ಎನ್ನಲು ಉಡಾಳ ಜೀವಿ ಎಂದ ಕೂಡಲೆ ಶ್ರೀಗಳವರಿಗೆ ಎಲ್ಲಿಲ್ಲದ ಅಕ್ಕರೆಯು ಕಡಲುಕ್ಕಿತು. ಶಾಸ್ತ್ರ ಪಂಡಿತರ ಸೋಗಿನ ಭಕ್ತಿಗಿಂತಲೂ ಶ್ರೀಮಂತರ ಡಾಂಭಿಕ ಆದರದ ಆಮಂತ್ರಣಕಿಂತಲೂ ಏನೊಂದ ಅರಿಯದೆ ಹಿಂದು ಮುಂದು ವಿಚಾರಿಸದ ನಿಷ್ಕಲ್ಮಷ ಹೃದಯದಿಂದ ಮಾತನಾಡುವ ಉಡಾಳರನ್ನು ನಾವು ಗೌರವಿಸಲುಲೇಬೇಕು ಅವರ ಆಮಂತ್ರಣಕ್ಕೆ ಸನ್ಮಾನ ಕೊಡಲೇ ಬೇಕೆಂದು ಒಪ್ಪಿಕೊಂಡು ಬಂದರಂತೇ ಮಹತ್ಮರು ಬರುತ್ತಾರೆಂದು ಶರಣಪ್ಪ ನವರು ದಿನವಿಡೀ ಜಾಗರಣೆಯಿಂದ ಮನೆಯನ್ನು ಸಾರಿಸಿ ಶುಚಿರ್ಭೂತರಾಗಿ ಬೆಳಗಾಗುವ ಮುಂಚೆಯೇ ಮಡಿಯಿಂದ ಪ್ರಸಾದಮಾಡಿದ್ದರಂತೆ ಶ್ರೀಗಳು ಬಂದತಕ್ಷಣ ಪಾದಪೂಜೆಮಾಡಿ ಅವರ ಪಾದೋದಕದಿಂದ ಮನೆಯನ್ನ ಮನವನ್ನು ಶುದ್ಧಗೊಳಿಸಿ ಶ್ರೀಗಳವರ ಶಿವಪೂಜೆಗೆ ಸಕಲವ್ಯವಸ್ಥೆಯನ್ನು ಮಾಡಿಕೊಟ್ಟರಂತೆ ಪೂರ್ವದಿಕ್ಕಿನಿಂದ ಹೊಂಬಣ್ಣದ ರವಿ ಕಿರಣ ಭೂಮಿಗೆ

CC-0. Jangamwadi Math Collection. Digitized by eGangotri

ಬೆಳೆಯುವದಕ್ಕೂ ಶ್ರೀಗಳವರ ಶಿವಪೂಜೆ ಲಿಂಗಾರ್ಚನೆ ಮುಗಿಯುವದಕ್ಕೂ ಸರಿ ಹೊಂದಿದಂತಾಗಲು ಶ್ರೀಗಳು "ಶರಣಪ್ಪ ನೀನು ಬಹಳ ಪುಣ್ಯಾತ್ಮ ನಪ್ಪಾ, ಇಂದಿನಿಂದ ನಿನ್ನ ಮನೆತನದ ತಾಪತ್ರಯಗಳೆಲ್ಲಾ ದೂರವಾಗುತ್ತ ಸೂರ್ಯ ಹೇಗೆ ಬೆಳಕಾಗಿ ಬರುತ್ತಾನೆ ನೋಡು ಅದರಂತೆ ನಿನ್ನ ಬಾಳು ಬೆಳಗುವದು." ಎಂದು ಹೇಳಿದರಂತೆ ಆ ಸಮಯದಲ್ಲಿ ಬ ಸಯ್ಯನವರು "ಬುದ್ದಿ; ಶರಣನಿಗೆ ಒಂದು ಹೆಣ್ಣುಮಗುವಾಗಿ 8-9 ವರ್ಷವಾಗಿವೆ ತಿರುಗಿ ಮಕ್ಕಳೇ ಇಲ್ಲಾ" ಎಂದರಂತೆ ಅಗ ಶ್ರೀಗಳು ತಾವು ಮೆಡುತ್ತಿದ್ದ ಪಾದುಕೆ ಗಳನ್ನು ಆಶೀರ್ವಾದ ಮಾಡಿದರಂತೆ ಇಷ್ಟೆಲ್ಲಾ ಮುಗಿದ ಮೇಲೆ ಪ್ರಸಾದ ಮುಗಿಸಿಕೊಂಡು ಶರಣಪ್ಪನವರು ಬಸಯ್ಯನವರನ್ನು ಅಂತರಂಗದಿ ಕರೆದು ಅಪ್ಪಾಂಗೆ ಭಿಕ್ಷೆ ಏನು ಕೊಡಬೇಕೆಂದು ಕೇಳಲು "ನಿನ್ನ ಭಕ್ತಿ ಇದ್ದಷ್ಟು ಸಂತೋಷದಿಂದ ಕೊಡು ಅವರು ಯಾರನ್ನೂ ಕಾಡುವವರಲ್ಲ ಕೈಯೊಡ್ಡಿ ಬೇಡುವವರೂ ಅಲ್ಲ ಎನ್ನಲು" ಕೇವಲ ಎರಡೇ ರೂಪಾಗಳಿದ್ದುವಂತೆ ಅಷ್ಟನ್ನೇ ಗುರುಚರಣಕ್ಕರ್ಪಿಸಿದರಂತೆ ಅದಕ್ಕೆ ಶ್ರೀಗಳು ಅಂದಠಂತೆ "ನೋಡ್ರಿ ಬಸಯ್ಯ ನವರೆ ಕಲ್ಲಾಪೂರಕ್ಕೆ ನಾವು ಹೋಗಬೇಕಾಗಿತ್ತು, ಗಾಡಿಯ ಖರ್ಚಿಗೆ ಇದ್ದಿಲ್ಲಾ ಶರಣಪ್ಪನವರು ಕೊಟ್ಟ ಭಿಕ್ಷೆ ಎಂಥ ಕೆಲಸಕ್ಕೆ ಉಪಯೋಗವಾಯ್ತುನೋಡಿರಿ ಇಲ್ಲವಾದರೆ ಇಂದು ಕಲ್ಲಾಪೂರದ ಭಕ್ತನ ಮನೆಯಲ್ಲಿಯ ಶಿವಪೂಜೆತಪ್ಪಿ ಹೋಗುತ್ತಿತ್ತು ಶಿವನು ದೊಡ್ಡವನು ಅಲ್ಲವೇನ್ರಿ" ಎಂದು ಸಂತೃಪ್ತಭಾವನೆ ಯಿಂದ ಆಶೀರ್ವದಿಸಿ ಹೋದರಂತೆ ಮುಂದೆ ಎಂಟು ಹತ್ತು ದಿನಗಳಲ್ಲಿ ಶರಣಪ್ಪನ ಧರ್ಮಪತ್ನಿಯಾದ ಅಮರಮ್ಮನವರ ರೋಗ ಗುಣವಾಗುತ್ತ ನಡೆದು ಕೊನೆಗೆ ಸಂಪೂರ್ಣ ಗುಣಮುಖಳಾಗಿ ನಾಲ್ಕುಜನ ಹೆಣ್ಣು ಇಬ್ಬರು ಗಂಡು ಮಕ್ಕಳ ತಾಯಿಯಾದಳು, ಮನೆತನವೂ ಯಾವ ಎಡರು ತೊಡರಿಲ್ಲದೆ ಸಾಗಹತ್ತಿತು. ಧಾರ್ಮಿಕ ವಿಚಾರಗಳತ್ತ ಎಳ್ಳಷ್ಟು ಲಕ್ಷವಿಲ್ಲದ ಸಾಮಾನ್ಯ ನೊಬ್ಬನು ಶ್ರೀಗಳವರ ಮಾತಕ್ಕೆ ತುಂಬಾ ವಿಶ್ವಾಸದಿಂದ ನಡೆದುಕೊಳ್ಳಹತ್ತಿದನು ಮಸಾಲಿ ವ್ಯಾಪಾರಸ್ಥನಾದ ತಾನು ಮಠಕ್ಕೆ ವಾರಕ್ಕೆ ಬೇಕಾಗುವಷ್ಟು ಸಾಮಾನು ಕೊಡುತ್ತಾ ಮನೆತನಕ್ಕೆ ತಾನು ತಂದ ಬೇಕಾದ ಪದಾರ್ಥಗಳಿದ್ದರೂ ಅರ್ಧ ಭಾಗ ಮಾಡಿ ಕೊಟ್ಟುಕಳಿಸುತ್ತ ಅನ್ಯೋನ್ಯವಾದ ಸಂಬಂಧಿಕರಂತೆ ನಡೆದುಕೊ- ಳ್ಳುತ್ತ ವಾರಕ್ಕೊಮ್ಮೆ ಶ್ರೀಗಳಿಂದ ಮನೆಯಲ್ಲಿ ಶಿವಪೂಜೆ ಮಾಡಿಸುವ ಕಾಯಕ ಹಾಕಿಕೊಂಡನಂತೆ. ಈಗಲೂ ಆ ದಂಪತಿಗಳಿದ್ದಾರೆ. ಶ್ರೀಗಳವರ ಚರಿತ್ರೆಗೆ

CC-0. Jangamwadi Math Collection. Digitized by eGangotri

ಇಲ್ಲದ್ದನ್ನು ಬರೆದು ಕೇವಲ ರಂಜನೀಯ ಸಾಹಿತ್ಯವಾಗಬಾರದೆಂದು ಬರೆಯು ವಾಗ ಖುದ್ದಾಗಿ ನಾನೇ ಹೋಗಿ ಅನೇಕ ವಿಷಯಗಳನ್ನು ಸಂಗ್ರಹಿಸಿಕೊಂಡು ಬಂದೆ. ಕಾಡಸಿದ್ಧರ ಬಗ್ಗೆ ಆ ದಂಪತಿಗಳಿಬ್ಬರೂ ತುಂಬು ಹೃದಯದಿಂದ ಒಂದೊಂದು ಸಂಗತಿ ಹೇಳುವಾಗ ಅಂತರಂಗದ ಅಳುವು ಹೊರಸೂಸುತ್ತಿದ್ದು ದನ್ನು ಪ್ರತ್ಯಕ್ಷ ಕಂಡಿರುವೆ ಶ್ರೀಗಳಿಲ್ಲದ್ದಕ್ಕೆ ಅವರವರ ಒಡನಾಟದ ನೆನಪು ಗಳಲ್ಲಿ ಎಷ್ಟೊಂದು ಆತ್ಮೀಯತೆ ಇತ್ತೆಂಬುದು ನಾನು ಕೂಡಾ ಮೈಮರೆತು ಕೇಳುತ್ತಲೇ ಧನ್ಯತೆ ಪಡೆದೆ. ಇದೇನು ಬಹು ಕಾಲದ ಸಂಗತಿಯ ಮಾತಲ್ಲ, ಶಾಸ್ತ್ರ ಪುರಾಣಗಳ ಕಟ್ಟುಕಥೆಯೂ ಅಲ್ಲ. ಸಿದ್ಧೇಶ್ವರ ಶಿವಾಚಾರ್ಯರ ಪೀಠಕ್ಕೆ ಒಂಭತ್ತನೆಯವರಾಗಿ ಷಟಸ್ಥಲದಾಚರಣೆಯಲ್ಲಿ ತುಂಬಿದ ಕೊಡದಂತೆ ಪರಿ ಪೂರ್ಣ ಗಾಂಭೀರ್ಯ ಉಳ್ಳವರಾಗಿ ಸಾಮಾನ್ಯರೆಲ್ಲರಿಗೂ ಸ್ನೇಹಿತನಂತೆ ಸರಿ ಸಮಾನ ಹೆಗಲ ಮೇಲೆ ಕೈಹಾಕಿ ಬದುಕಿಗೊಂದು ಬೆಲೆ ಕೊಟ್ಟ ಉಜ್ವಲ ಚಾರಿತ್ರ್ಯದ ತಪಸ್ವಿಗಳ ಚರಿತ್ರೆ ಇಂಥ ವಿಖ್ಯಾತ ದಾರ್ಶನಿಕರು ಸಿಗುವದೇ ಅಪರೂಪ ಈ ಪೀಠದ ಹಿಂದಿನ ಶ್ರೀಗಳ ಇತಿಹಾಸ ಆಗಿನ ವಾತಾವರಣ ದಲ್ಲಿ ಯಾರೂ ಬರೆದಿಲ್ಲವೊ ಅಥವಾ ಚರಿತ್ರಾ ಇತಿಹಾಸಕ್ಕೆ ಸಾಕ್ಷಿಭೂತಗಳಾಗಿ ಮೂಲ ಹಡಗಲಿಯಲ್ಲಿ ನಿಂತಿರುವ ರಾಮಲಿಂಗ ದೇವಸ್ಥಾನ ಮಠ ಮಲಪ್ರಭೆಯ ಮಧ್ಯದಲ್ಲಿರ್ದ ಶಿವಲಿಂಗ ಇವೆಲ್ಲ ಹೇಳುವಾಗ ನಾವೇಕೆ ಬರೆಯಬೇಕೆಂದು ಇತಿಹಾಸಕಾರರು ನಿರ್ಲಕ್ಷಿಸಿದರೋ ಅದೊಂದೂ ತಿಳಿಯದು ಈಗಿದ್ದ ಶ್ರೀಗಳು ಒದಗಿಸಿಕೊಟ್ಟ ಕೆಲವೇ ಮಾಹಿತಿಗಳಿಂದ ಬರೆದಿದ್ದೇನೆ. ನಮ್ಮ ಸಮಕಾಲೀನ ದಲ್ಲಿ ಜೀವಿಸಿ ಸಮಾಜಕ್ಕೆ ಮಹೋಪಕಾರ ಮಾಡಿದ ಮಹಾತ್ಮರ ಚರಿತ್ರಾರ್ಹ ಇತಿಹಾಸಕ್ಕೆ ಯಾವ ತರದ ಕುಂದೂ ಬಾರದಂತೆ ಇದ್ದ ಸಂಗತಿಗಳನ್ನು ಬಿಡದೆ ಇಲ್ಲಿದ್ದನ್ನು ಬಯಸದೇ ಸಮಯೋಚಿತವಾಗಿ ಬರೆಯಲು ಪ್ರಯತ್ನ ಮಾಡಿರುವೆ,

ಇದೇ ರೀತಿ ವೀರಶೈವ ತತ್ವಾನುಸಂಧಾನದಿಂದ ಬಾಹ್ಯದಲ್ಲೂ, ಅಂತರಂಗದಲ್ಲೂ ಕೂಸು ಹುಟ್ಟರೀತೆ ಜಗದೀಶ ಚೇತನದೊಡನೆ ರಮಿಸುತ್ತ, ಜಗತ್ತನ್ನೇ ಉದ್ಧರಿಸಬಲ್ಲ ಜಗದ್ವಿಖ್ಯಾತರಿಗೆ ಎಲ್ಲರೂ ಬಾಗುತ್ತಿದ್ದರಷ್ಟೇ ಅಲ್ಲ ಹಾವೂ ಬಾಗುತ್ತಿತ್ತೆಂದರೆ ಅಚ್ಚರಿಯ. ಒಂದೊಮ್ಮೆ ಕಾಡಸಿದ್ಧರು ಶರಣಪ್ಪನ ಮನೆಯಿಂದ ಮಠಕ್ಕೆ ಹೋಗಲು ತಡವಾಯಿತಂತೆ ರಾತ್ರಿಯ ಹೊತ್ತು ಕೋಟೆಕಲ್ಲ ಸಮೀಪಕ್ಕೆ ಬರಲು ನಿಡಿದಾದ ನಾಗಸರ್ಪವು ದಾರಿಯಲ್ಲಿದ್ದಕ್ಕೊ

CC-0. Jangamwadi Math Collection. Digitized by eGangotri

ಮಲಗಿತ್ತಂತೆ ಎಲ್ಲೆಲ್ಲೂ ನಿಶ್ಶಬ್ದ ನೀರವತೆಯಲ್ಲಿ ಅದರ ಶ್ವಾಸೋಚ್ಛ್ವಾಸದ ಸಪ್ಪಳಕ್ಕೆ ಮುಂದೆ ಕಾಲಿಕ್ಕದೆ ಬ್ಯಾಟ್ರಿಯನ್ನು ಹಚ್ಚಿದರಂತೆ ಹೆಜ್ಜೆ ಕಿತ್ತಿ ಇಟ್ಟಿದ್ದರೆ ಶ್ರೀಗಳ ಪಾದ ಅದರ ಮೇಲೆ ನೇರವಾಗಿ ಕೂಡುತ್ತಿರಲು ಬೆಳಕು ಬಿದ್ದ ತಕ್ಷಣ ಭುಸುಗುಡುತ್ತ ಹೆಡೆಯೆತ್ತಿ ನಿಂತಿತಂತೆ ಅಷ್ಟರಲ್ಲಿ ಶ್ರೀಗಳು–'ಏನಪಾ ನಾಗೇಂದ್ರಾ ! ನಾವು ಮಠಕ್ಕೆ ಹೋಗಬಾರದೆಂದು ಅಡ್ಡಗಟ್ಟಿದರೆ ಹೇಗೆ ? ಶಿವನ ಕಂಠಾಭರಣನಾದ ನೀನು ಶಿವಪೂಜೆಗೆ ಅಡ್ಡಗಟ್ಟುವಿಯಾ ? ತ್ರಿಕಾಲ ಲಿಂಗಪೂಜೆಯು ನಮ್ಮ ಕಾಯಕಕ್ಕೆ ಭಂಗತರುವಿಯಾ ? ಬೇಡಪ್ಪಾ ಬೇಡಾ ; ಹಾಲನೆರೆದರೂ ವಿಷಜಂತುವಾದ ನಿನಗೆ ಹೂವಿನ ಮನಸ್ಸು ಹುಟ್ಟದೆಂದು ಲೋಕಾಪವಾದ ನಿನಗಿದ್ದರೂ ನಮಗೆ ಮಾತ್ರ ನೀನು ಲೋಕೋಪಕಾರಿ ದಯಮಾಡಿ ದಾರಿಬಿಡಪ್ಪ" ಎಂದರಂತೆ ಅದು ಸಂತೋಷವಾಗಿ ಆಡುತ್ತ ಅಡ್ಡಾಗಿ ಹೋಗದೆ ಬಂದ ದಾರಿಯಿಂದ ಬದಿಗೆ ಸರಿದು ಅವರನ್ನೆ ತದೇಕ ಚಿತ್ತದಿಂದ ನೋಡುತ್ತ ಬೀಳ್ಕೊಟ್ಟಿತಂತೆ ಮತ್ತೊಂದು ಸಲ ಅಮಾವಾಸ್ಯೆಯ ದಿನ ಕಲ್ಲಾಪೂರಕ್ಕೆ ಹೋಗುವಾಗ ಶ್ರೀಗಳು ಕೊಣ್ಣೂರಿನಿಂದ ಹಳ್ಳವನ್ನು ದಾಟಿಹೋಗುವಾಗ ಬಹುಕಾಲದಿಂದ ವಾಸವಾಗಿದ್ದ ಬ್ರಹ್ಮ ಪಿಶಾಚಿಯೊಂದು ಕತ್ತಲೆಯ ಹೊತ್ತಿನಲ್ಲಿ ದಾರಿಯೇ ಕಾಣಿಸದಂತೆ ಚೆಲ್ಲಾಟವೆಬ್ಬಿಸಿತ್ತಂತೆ. ಅಂತರಂಗದಲ್ಲಿ ಧ್ಯಾನಾಸಕ್ತರಾಗಿ ಕಂಡ ಶ್ರೀಗಳು ಬೆದರದೆ "ಅಯ್ಯೊ ಪಾಪ ಮನಸ್ಸಿನ ಸಂಕಲ್ಪಗಳನ್ನು ಬಚ್ಚಿಟ್ಟುಕೊಂಡು ಯಾರಿಗೂ ತಿಳಿಸದೇ ಮೃತಪಟ್ಟ ಜೀವಿ ಬ್ರಹ್ಮ ಪಿಶಾಚಿಯಾಗಿ ಮಹಾತ್ಮರ ದರ್ಶನದಿಂದ ತನ್ನ ಜೀವನದ ಮುಕ್ತಿಗಾಗಿ ಹಂಬಲಿಸುತ್ತ ಬಹು ಕಾಲದಿಂದ ಚೆಲ್ಲಾಟ ನಡೆಸುತ್ತ ನಡೆದಿದೆ. ಶ್ರೀಗುರು ಕಾಡಸಿದ್ಧೇಶಾ ! ಪಿಶಾಚಿ ಜೀವನದಿಂದ ಆತನನ್ನು ಮುಕ್ತಗೊಳಿಸಿ ನಮಗೆ ದಾರಿ ಮಾಡಿಕೊಡು" ಎಂದು ಕಣ್ಮುಚ್ಚಿ ಹಾಗೇ ನಡೆಯುತ್ತ ಸಾಗಿದರಂತೆ ದಾರಿಯು ಸಾಗಿದಂತೆ ಮುಂದೆ ಕಣ್ತೆರೆದು ನೋಡಲು ಊರು ಸಮೀಪದಲ್ಲಿಯೇ ಬಂದಿತಂತೆ ಕಲ್ಲಾಪೂರದ ಭಕ್ತರು "ಬುದ್ಧಿ ಅಮಾವಾಸ್ಯೆಯ ದಿನ ಕತ್ತಲಿನ ಹೊತ್ತಿನಲ್ಲಿ ಯಾರೂ ಸುರಕ್ಷಿತ ಊರಲ್ಲಿ ಬಂದವರಿಲ್ಲಾ ಅಲ್ಲೊಂದು ಬ್ರಹ್ಮ ಪಿಶಾಚಿ ಬಹು ಜನರನ್ನು ಪೀಡಿಸಿ ಬಿಟ್ಟಿದೆ, ಇನ್ನೆಂದೂ ನೀವು ಹೊತ್ತಾಗಿ ಬರಬೇಡಿ ನಿಮ್ಮ ಪ್ರಾಣಕ್ಕೇನಾದರೂ ಅಪಾಯ ಸಂಭವಿಸಿದರೆ ನಮಗೆಲ್ಲಾ ಯಾರು ದಿಕ್ಕು ?" ಎನ್ನಲು ಶ್ರೀಗಳು "ನೋಡಿ ನಾವು ಹುಟ್ಟಿ ಬಂದಾಗಲೇ ಸಾವೆಂಬುವನ್ನು ಕಟ್ಟಿಕೊಂಡೇ ಬಂದಿದ್ದೇವೆ. ವೀರಶೈವರು

CC-0. Jangamwadi Math Collection. Digitized by eGangotri

ಪ್ರಾಣದಲ್ಲಿ ಭಯದಿಂದ ಇರಬಾರದು, ನಿರ್ಭಯರಾಗಿರಬೇಕು. ಪ್ರಾಣಕ್ಕೆ ಹೆದರಿ ಕಾಯಕಕ್ಕೆ ದೂರಾದರೆ ಅವರೆಂದೂ ಶಿವಭಕ್ತರಾಗುವದಿಲ್ಲ" ಎಂದು ಸಮಾಧಾನ ಹೇಳಿದರಂತೆ. ಮುಂದೆ ಆ ಸ್ಥಾನದಲ್ಲಿ ಪಿಶಾಚಿಯ ಭಯವೇ ತಪ್ಪಿಹೋಯಿತಂತೆ. ಹೀಗೆ ಒಂದಲ್ಲ ಎರಡಲ್ಲ ನೂರಾರು ಘಟನೆಗಳು ಜರಗುತ್ತ ಹೋದವು. ಅವರು ಹಿಗ್ಗದೇ ಕುಗ್ಗದೇ ವೈರಾಗ್ಯದ ತುತ್ತೂರಿಯನೂದುತ್ತ ಜ್ಞಾನದ ಕೊಂಬು ಕಹಳೆಯನಾದದಿಂದ ಮಠವನ್ನು ಮಹಾ ತಪಸ್ಸಿನ ಬೀಡಾಗಿ ಮಾಡಿದರು. ವಿಹಾರಿಗಳಾಗಿ ಬರುವವರಿಗೆ ವಿಶ್ರಾಂತಿಯ ಶಾಂತಿನಿಕೇತನ ಮಾಡಿದರು ನಾಡಿನ ನಾಲ್ಕೂ ನಿಟ್ಟಿನ ಮಠಾಧೀಶರೊಂದಿಗೆ ಸಂಪರ್ಕಹೊಂದಿ ಅವರ ಚಿತ್‌ಶಕ್ತಿಯನ್ನು ತಮ್ಮೆಡೆಗೆ ಸೆಳೆದುಕೊಂಡರು. ಭಯಂಕರ ಕಾಡಿನಂತಿರ್ದ ಸ್ಥಾನವೀಗ ಶ್ರೀ ಕಾಡಸಿದ್ಧರ ಪವಿತ್ರ ಪುಣ್ಯ ಶ್ರಮದ ಸ್ಥಾನವಾಗಿ ಬೆಳಗುತ್ತ ನಡೆಯಿತು. ಗುಳೇದಗುಡ್ಡದಲ್ಲಿಯೂ ಭಕ್ತರ ಸಂಖ್ಯೆ ಬೆಳೆಯುತ್ತ ನಡೆಯಿತು. ಸ್ವಾಮಿಗಳ ಮೇಲೆ ಬಹಳ ಶ್ರದ್ಧೆಯಿಂದ ನಡೆದುಕೊಳ್ಳುತ್ತಿದ್ದ ಹೊಸಪೇಟೆಯ ತೋಟಪ್ಪ ಹಟ್ಟಿಯವರು ತಮ್ಮ ಮನೆಯಲ್ಲಿ ಸಿಹಿಭೋಜನಕ್ಕೆ ಎಂದೇ ಮಾಡಲಿ ''ಸ್ವಾಮಿಗಳು ಈ ದಿವಸ ಬಂದರೆ ಒಳ್ಳೆಯದಾಗುತ್ತದೆ'' ಎಂದು ಹಂಬಲಿಸುತ್ತಿರುವಷ್ಟರಲ್ಲಿ ಶ್ರೀಗಳು ಬಂದುಬಿಡುತ್ತಿದ್ದರಂತೆ. ಹೀಗೆ 8-10 ಸಲ ನಿರೀಕ್ಷೆಗೆ ಕಾಯುತ್ತಿರಲು ಸಾಕ್ಷಾತ್ಕಾರ ಕೊಡುತ್ತಿದ್ದರಂತೆ ಭಕ್ತರ ಅಂತರಂಗದ ಧ್ವನಿ ಶ್ರೀಗಳವರಿಗೆ ಯಾವಾಗಲೂ ಕೇಳುತ್ತಿತ್ತೇನೋ ಅನ್ನುವಷ್ಟು ಗುರುಭಕ್ತರ ಏಕಾತ್ಮತೆಯಲ್ಲಿ ಜನ ಕಾಣುತ್ತಿತ್ತು. ಅದರಂತೆ ಜಿಡಗಿ ಸಂಗಪ್ಪನವರು ಕೂಡಾ ಬಹಳ ಶ್ರದ್ಧೆಯಿಂದ ನಡೆದುಕೊಳ್ಳುತ್ತಿದ್ದರು. ''ಅಜ್ಜಾರೇ! ನಿಮಗೆ ಈ ದಿವಸ ಪ್ರಸಾದಕ್ಕೆ ಏನು ಮಾಡಿಸಲಿ" ಎಂದು ಕೇಳಿದಾಗ ಶ್ರೀಗಳು" ಮೇಲಿಂದಮೇಲೆ ಶ್ರೀಮಂತರ ಸಿಹಿ ಊಟದಿಂದ ನಮ್ಮ ನಾಲಿಗೆಯ ರುಚಿ ಕೆಟ್ಟಿದೆ ಸಂಗಣ್ಣನವರೇ ಇಂದು ನೀವು ಬದನೀಕಾಯಿಪಲ್ಲೆ ಅಥವಾ ಪುಡಿಯಪಲ್ಲೆ ಚಟ್ನಿ-ರೊಟ್ಟಿ ಮತ್ತು ಹುಳಿ ನುಚ್ಚು ಮಾಡಿಸಿದರೇ ಮಾತ್ರ ಪ್ರಸಾದ ತೆಗೆದುಕೊಳ್ಳುತ್ತೇವೆ. ಇಲ್ಲದಿದ್ದರೆ ಇಲ್ಲಾ'' ಎಂದು ಹೇಳುತ್ತಿದ್ದರಂತೆ. ಇದರಿಂದ ವೀರ ಸನ್ಯಾಸಿಯಾದ ನೂತನ ತರುಣರಂತಿರ್ದ ವಿವೇಕಾನಂದರ "ಏನು ತಿಂದರೆ ಏನು ಕುಡಿದರೆ ಏನು. ಆತ್ಮಗೆ ಕೊರತೆಯೆ ? ಸರ್ವ ಪಾಪವ ತಿಂದು ತೇಗುವ ಗಂಗೇಗೇಂ ಕೊಳೆ ಕೊರತೆಯೆ ? ಎಂಬ ವೀರವಾಣಿ ನೆನಪಾಗುವದು. ಸಾತ್ವಿಕ

CC-0. Jangamwadi Math Collection. Digitized by eGangotri

ಆಹಾರವು ಮಾತ್ರ ವಿರಕ್ತ ಜೀವಿಗಳಿಗೆ ಶ್ರೇಷ್ಠವೆಂದು ತಿಳಿಸಿದ್ದರೂ ಮುಖ್ಯ ವಾಗಿ ಹಸಿದವರಿಗೆ ಎಲ್ಲವೂ ತೃಪ್ತಿಕೊಡುತ್ತದೆ. ಅವರು ಯಾವಾಗಲೂ ಜ್ಞಾನದ ಹಸಿವು ಉಳ್ಳವರಾಗಿ ಕಾಯಕದಿಂದ ಹಸಿವು ಉಳ್ಳವರಾಗಿ, ಅದು ಇದು ಎನ್ನದೇ ಸಾಮಾನ್ಯರುಣ್ಣುವ ಆಹಾರವನ್ನೇ ಅವರು ಕೂಡಾ ತೃಪ್ತಿಯಿಂದ ಲಿಂಗಕ್ಕರ್ಪಿಸಿ, ಸೇವಿಸುತ್ತಿದ್ದರು. ಒಂದು ದಿನ ಬಿನ್ನಹ ಮಾಡಿ ಬಂದ ಜಿಡಗಿ ಸಂಗಪ್ಪನವರ ಮನೆಗೆ ಶ್ರೀಗಳು ತಡವಾಗಿ ಬಂದರಂತೆ. ಅದಕ್ಕೆ "ಬುದ್ಧಿ ನಾವು ಪ್ರಾಪಂಚಿಕರು ನಿಮ್ಮ ದಾರಿ ನೋಡುತ್ತ ನಾವು ಉದ್ಯೋಗ ಬಿಟ್ಟು ಕುಳಿತರೆ ಹೇಗೆ ಎಷ್ಟು ತಡ ಮಾಡಿ ಬಂದಿರಿ" ಎಂದು ಸಂಗಪ್ಪನವರು ಕೇಳಲು ಶ್ರೀಗಳು "ನೋಡ್ರಿ ಸಂಗಪ್ಪನವರ ನಾವು ಕಾಡಿನಾಗ ಇರುವ ಕಾಡು ಮನುಷ್ಯರು ನಮಗೆ ಟಾಯಂ ಇಲ್ಲಾ ತಾಸು ಹೆಚ್ಚೂ ಕಡಿಮಿ ಆಗೂದ್ರೆಪಾ" ಎಂದರಂತೆ ಆಗ ಸಂಗಪ್ಪ ನವರು ವಿಚಾರಿಸಿ "ಓಹೋ ಬುದ್ಧಿಯವರೆ ಟಾಯಂ ಇಲ್ಲಾ ಎಂದರು ಶಿವಾಧೀನರಾದ ನಮ್ಮ ತಂದೆಯವರ ಪಾಕೀಟವಾಚು ಇದೆ ಅದನ್ನೇ ಕೊಟ್ಟರೆ ಒಳ್ಳೆಯದಾಗುವದೆಂದು" ಸಂಕಲ್ಪಿಸಿ ಪ್ರಸಾದ ಮುಗಿದ ಮೇಲೆ "ಬುದ್ಧಿ ಭಕ್ತರ ಮನೆಗೆ ಬರಬೇಕಾದರೆ ನಿಮಗೆ ಟಾಯಂ ಬೇಕಾಗುವದು. ಅಲ್ಲದೇ ಪರಊರಿಗೆ ಹೋಗಬೇಕಾದರು ನಿಮಗೆ ಟಾಯಂ ಬೇಕು ಇದೋ ತಕ್ಕೊಳ್ಳಿ" ಎಂದು ವಾಚನ್ನು ಕೊಟ್ಟರಂತೆ ಆಗ ಶ್ರೀಗಳು "ಬೇಡ ಸಂಗಣ್ಣನವರೆ; ಅಡವಿಯಲ್ಲಿರುವ ವೈರಾಗಿಗಳಿಗೆ ಇವು ಎಲ್ಲಾ ಯಾಕೆ ? ಇದರಿಂದ ಇದನ್ನು ಜೋಪಾನ ಮಾಡುವ ಜವಾಬ್ದಾರಿ ಹಚ್ಚಿ ನಮ್ಮ ಚಿತ್ತವು ಚಂಚಲವಾಗುವದು" ಎಂದರಂತೆ ಆದರೂ ಒತ್ತಾಯ ಮಾಡಿ ಕೊಟ್ಟೇಬಿಟ್ಟರಂತೆ ಹೀಗೆ ನಿಸ್ಪೃಹ ಜೀವನದಿಂದ ಜ್ಞಾನ ಸಮುದ್ರದೊಳು ಕೂಸು ಹುಚ್ಚರ ತೆರದಂತೆ ಈಜುತ್ತ ಲೋಕತ್ರಯುವನ್ನೆಲ್ಲ ಶತಕೋಟಿ ತೇಜದಿಂದ ತಾನೇ ತಾನಾಗಿ ಬೆಳಗಿದ ಅಪಾರ ಮಹಿಮಾನ್ವಿತರು ಶ್ರೀ ಕಾಡಸಿದ್ಧರು, ಅವರ ದಿನ ನಿತ್ಯದ ಆಚಾರ ವಿಚಾರ ಗಳಲ್ಲಿ ಕೆಲವು ಶರಣರ ವಚನಗಳು ಸಮನ್ವಯವಾಗುವದು ಕಂಡುಬರುತ್ತದೆ.

"ಎನ್ನ ಕಾಯದೊಳಗೆ ನಿನ್ನ ಕಾಯವಿಪ್ಪುದು, ನಿನ್ನ ಕಾಯದೊ ಳಗೆ ಎನ್ನ ಕಾಯವಿಪ್ಪುದು ಎನ್ನ ಜೀವದೊಳು ನಿನ್ನ ಜೀವವಿಪ್ಪುದು ನಿನ್ನ ಜೀವದೊಳು ಎನ್ನ ಜೀವವಿಪ್ಪದು ಎನ್ನ ಪ್ರಾಣದೊಳು ನಿನ್ನ ಪ್ರಾಣವಿಪ್ಪುದು ನಿನ್ನ ಪ್ರಾಣದೊಳು ಎನ್ನ ಪ್ರಾಣವಿಪ್ಪುದು ಎನ್ನ ಇಂದ್ರಿಯಂಗಳೊಳು ನಿನ್ನ

CC-0. Jangamwadi Math Collection. Digitized by eGangotri

ಇಂದ್ರಿಯಂಗಳಿಪ್ಪವು ನಿನ್ನ ಇಂದ್ರಿಯಂಗಳೊಳು ಎನ್ನ ಇಂದ್ರಿಯಂಗಳಿಪ್ಪವು ನಿನ್ನ ವಿಷಯಂಗಳೊಳು ಎನ್ನ ವಿಷಯಂಗಳಿಪ್ಪವು ನಿನ್ನ ವಿಷಯಂಗಳೊಳು ನಿನ್ನ ವಿಷಯಂಗಳಿಪ್ಪವು ಎನ್ನ ಕರಣಂಗಳೊಳು ನಿನ್ನ ಕರಣಂಗಳಿಪ್ಪವು ನಿನ್ನ ಕರಣಂಗಳೊಳು ಎನ್ನ ಕರಣಂಗಳಿಪ್ಪವು. ಇಂತೀ ನಾನೇ ರೂಪು ನೀನೇ ನಿರೂಪು ರೂಪಿಂಗೆ ಕೇಡುಂಟು ನಿರೂಪಿಂಗೆ ಕೇಡಿಲ್ಲ ನಾನು ಕರ್ಪೂರ ನೀನು ಜ್ಯೋತಿ, ಅನುಸ್ಯೂತವಾಗಿ ಒಳಡಗಿದೆನು ಕೂಡಲ ಚನ್ನಸಂಗಮದೇವಾ" ಭಕ್ತಸ್ಥಳದ ಲಿಂಗಾಗ ಸಾಮರಸ್ಯದಲ್ಲಿ ಭಕ್ತರು ಪ್ರಾರ್ಥಿಸುವಂತೆ ಇದ್ದಳು "ಎಲ್ಲರೂ ವೀರರು, ಎಲ್ಲರೂ ಧೀರರು, ಎಲ್ಲರೂ ಮಹಿಮರು, ಎಲ್ಲರೂ ಪ್ರಮಥರು ಕಾಳಗದ ಮುಖದಲ್ಲಿ ಕಾಣಬಹುದು ಓಡುವ ಮುಖದಲ್ಲಿ ಕಾಣಬಾರದು ನಮ್ಮ ಕೂಡಲಸಂಗನ ಶರಣರೇ ಧೀರರು ಉಳಿದವರು ಅಧೀರರು" ಇದು ಮಹೇಶ ಸ್ಥಳದಲ್ಲಿ ಕರ್ತವ್ಯ ನಿಷ್ಠೆಯಲ್ಲಿ ಧೈರ್ಯದಿಂದಿರುವದು. ಇದನ್ನೂ ಕೂಡಾ ಅನುಸರಿಸಿದ್ದರು. "ನಂಬಿದರೆ ಪ್ರಸಾದ ನಂಬದಿದ್ದರೆ ವಿಷವು ನೋಡಾ ತುಡುಕಬಾರದು ನೋಡಾ ಲಿಂಗಪ್ರಸಾದ ಸಂಗನಪ್ರಸಾದ ಕೂಡಲ ಸಂಗನ ಪ್ರಸಾದ ತುಡುಕಿದರೆ ಸಿಂಗಿಕಾಳಕೂಟ ವಿಷವು" "ಇಂದಿಗೆಂದು ನಾಳಿಗೆಂದು ಚಿಂತಿಸಲೇಕೆ, ತಂದಿಕ್ಕುವ ಶಿವನಿಗೆ ಬಡತನವೇ ರಾಮನಾಥಾ" ಪ್ರಸಾದಿ ಸ್ಥಲದಾಚರಣೆಯಲ್ಲಿ ಇಷ್ಟೊಂದು ಪ್ರಸನ್ನತೆ ಇರಬೇಕು ಶ್ರೀಗಳು ಹಾಗೆ ಇದ್ದರು. ಅಂಗದ ಮೇಲಿನ ಲಿಂಗ ಪ್ರಾಣದ ಮೇಲೆ ಬಂದು ನಿಲ್ಲುವನಕ್ಕ ಪೂಜಿಸಬೇಕು. ಪ್ರಾಣದ ಮೇಲಿನ ಅರಿವು ಕರಿಗೊಂಬನಕ್ಕ ನೆನೆಯಬೇಕು ನೆನವು ನಿಷ್ಪತ್ತಿಯಾದ ಮ. ಶ್ರೀ ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗನೆಂಬ ನಾಮವಡಗಿತ್ತು"

"ಮಣಿಯದೆಣಿಸಿ ದಿನವ ಕಳೆಯಲು ಬೇಡ ಕಣಿಯ ಪೂಜಿಸಿ ದಿನವ ಕಳೆಯಲು ಬೇಡ ಕ್ಷಣವಾದರೂ ನಿಜದ ನೆನಹೇ ಸಾಕು ಸಾಕು. ಕ್ಷಣದೊಳಗಣ ಅರ್ಧವಾದರೂ ನಿಜದ ನೆನಹೆ ಬೆಂಕಿಯೊಳಗುಳ್ಳ ಬಿಸಿ ಬಿಸಿನೀರೊಳಗುಂಟೆ ಗುಹೇಶ್ವರಾ"

"ದೀಪದೊಳಗೆ ವ್ಯಾಪಿಸಿಕೊಂಡಿರ್ಪುದು ಒಂದೇ ಜ್ಯೋತಿ ನೋಡಾ. ಅದು ರೂಪಲ್ಲ ನಿರೂಪವಲ್ಲ ಸರ್ವವ್ಯಾಪಾರವ ಹೊಂದಿದ ಸ್ವಯಂ

CC-0. Jangamwadi Math Collection. Digitized by eGangotri

LIBRARY.
Jangamwadi Math, VARANASI
Acc. No. 718


ಜ್ಯೋತಿ ನೋಡಾ ಅದೆ ಎನ್ನ ಪ್ರಾಣಲಿಂಗವೆಂಬ ಪರತರ ಪರಮಾನಂದ ಪರಂಜ್ಯೋತಿ ನೋಡಾ ಅಖಂಡೇಶ್ವರ"

ಇವು ಪ್ರಾಣಲಿಂಗದ ಆಚರಣೆಯಲ್ಲಿಯ ಪೂರ್ಣ ಯೋಗದಂತಿರುವ ಕೆಲವು ವಚನಗಳು. ಅದರಂತೆ ಸ್ವತಃ ಆಚರಿಸುತ್ತಿದ್ದರು ಪೂಜ್ಯರು.

"ತನ್ನಲ್ಲಿ ತಾನು ಪ್ರತ್ಯಕ್ಷಾನುಭಾವದಿಂದ ತಿಳಿದು ನೋಡಿ ಆ ತಿಳಿದ ತಿಳುವಿನೊಳಗೆ ಲಿಂಗದ ನಿಜವ ಕಂಡು ಕಾಂಬಜ್ಞಾನ ತಾನೆಂದರಿದು ಕಾಂಬುದು ಕಾಣಿಸಿಕೊಂಬುದು ಎರಡೊಂದಾದ ನಿಲುವು ತಾನೆ ನಿಮ್ಮ ನಿಲವು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ"

"ಕೆರೆಹಳ್ಳ ಭಾವಿಗಳು ಮೈದೆರದರೆ ಗೊಳ್ಳೆ ಗೊರಚಿ ಚಿಪ್ಪುಗಳ ಕಾಣಬಹುದು ವಾರಿಧಿ ಮೈದೆರೆದರೆ ರತ್ನಂಗಳ ಕಾಣಬಹುದು. ನಮ್ಮ ಕೂಡಲ ಸಂಗನ ಶರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬಹುದು."

"ಹಸಿವಾದೊಡೆ ಬಿಕ್ಷಾನ್ನವುಂಟು ತೃಷೆಯಾದೊಡೆ ಕೆರೆ ಹಳ್ಳ ಭಾವಿಗಳುಂಟು ಶಯನಕೆ ಹಾಳು ದೇಗುಲಗಳುಂಟು ಚನ್ನಮಲ್ಲಿಕಾರ್ಜುನಯ್ಯ ಆತ್ಮ ಸಂಗಾತಕ್ಕೆ ನೀನೆನಗುಂಟು" ಇವೆಲ್ಲ ಶರಣ ಸ್ಥಳದಲ್ಲಿಯ ಪ್ರಮುಖಗಳು ಇನ್ನು ಐಕ್ಯಸ್ಥಳದಲ್ಲಿಯವು ಹೀಗಿವೆ.

"ನಿಮ್ಮ ಪೂಜಿಸಿಹೆನೆಂದಡೆ ತನುವಿಲ್ಲವಯ್ಯಾ ಎನಗೆ ಅದೇನು ಕಾರಣವೆಂದರೆ ಎನ್ನ ತನುವೆ ನೀವೇ ಯಾದಿರಾಗಿ ನಿಮ್ಮ ನೆನೆದೆನೆಂದರೆ ಅರುಹಿಲ್ಲವಯ್ಯಾ ಎನಗೆ ಅದೇನು ಕಾರಣವೆಂದರೆ ಆ ಅರುಹೇ ನೀವೆ ಯಾದಿರಾಗಿ ಅಖಂಡೇಶ್ವರಾ ನಿಮ್ಮೊಳಗೆ ನಾನು ಉರಿಗೊಂಡ ಕರ್ಪುರದಂತಿರ್ದೆನಯ್ಯಾ"

ಮಾಡುವಂತಿರಬೇಕು ಮಾಡುವ ಮಾಟದೊಳಗೆ ತಾನಿಲ್ಲದಂತಿರಬೇಕು. ಕೂಡಲ ಸಂಗಮ ದೇವರ ನೆನೆವುತ್ತ ನೆನೆಯದಂತಿರಬೇಕು"

"ಅನಂತ ಸಾಧನಂಗಳ ಕಲಿತ ಐಗಾರನು ಅಭ್ಯಾಸವ ಕಲಿಸುವವನಲ್ಲದೇ ಆತ ಮರಳಿ ಅಭ್ಯಾಸ ಮಾಡುವನೇ ಅಯ್ಯ ಅಖಂಡ ಪರಿಪೂರ್ಣ ಪರಬ್ರಹ್ಮವನೊಡಗೂಡಿದ ಮಹಾಘನ ಪರಶಿವ ಶರಣನು ಸತ್ಕ್ರಿಯೆಯ ನಾಚರಿಸುವರೆಲ್ಲ ಉಪಚಾರವಾಗಿ ಆಚರಿಸುವವನಲ್ಲದೆ

CC-0. Jangamwadi Math Collection. Digitized by eGangotri

LIBRARY
Jangamwadi Math, VARANASI
Acc. No. ...1200 - 1119



ಮರಳಿ ತಾನು ಫಲವಹ ಮುಕ್ತಿಯ ಪಡೆವೆನೆಂದು ಆಚರಿಸುವನೇನಯ್ಯಾ ಇದು ಕಾರಣ ನಿಮ್ಮ ಶರಣನು ಎಷ್ಟು ಸತ್ಕ್ರಿಯೆಯನಾಚರಿಸಿದರೂ ಘೃತ ಸೋಂಕಿದ ರಸನದಂತೆ ನಿರ್ಲೇಪನಾಗಿಪ್ಪನಯ್ಯಾ ಅಖಂಡೇಶ್ವರ" ಹೀಗೆ ಇದ್ದರೂ ಪ್ರಾಮುಖ್ಯವಾಗಿ ಐಕ್ಯಸ್ಥಲದಲ್ಲಿ ಕ್ರಿಯಾಚರಣೆಗಳೇನೂ ಇಲ್ಲ, ಇವೆಲ್ಲವೂ ಲೋಕಸಂಗ್ರಹಾರ್ಥವಾಗಿ ಜನ ಸಾಮಾನ್ಯರಿಗೂ ತಿಳಿಯುವದಕ್ಕೆ ಇರುವವಲ್ಲದೇ ಇವುಗಳಿಂದ ಯಾವಲೇಪವೂ ಇಲ್ಲ. ಹೀಗೆ ಕಾಡಸಿದ್ಧ ಶ್ರೀಗಳು ಷಟಸ್ಥಲದಾಚರಣೆಯನ್ನು ನಿಷ್ಠೆಯಿಂದ ಪಾಲಿಸುತ್ತಿದ್ದುದು ಕಂಡು ಬರುತ್ತಿದ್ದಿತು. ಅಂದರೆ ಅಷ್ಟಾವರ್ಣ ಪಂಚಾಚಾರ ಗಳಲ್ಲಿ ಇರವೆಂದಲ್ಲ. ಯಾಕೆಂದರೆ ವೀರಶೈವ ತತ್ವಗಳಲ್ಲಿ ಒಬ್ಬೊಬ್ಬ ಮಹಾತ್ಮರು ಒಂದೊಂದು ವೈಶಿಷ್ಟ್ಯ ಕಾಯಕವನ್ನು ಅಂಗೀಕರಿಸುತ್ತಿದ್ದರು. ಎಂಬುದಕ್ಕೆ ಈ ವಚನವು ಪುಷ್ಟಿಕರಿಸುತ್ತದೆ.

"ಒಬ್ಬರು ನಡೆದ ಆಚರಣೆಯಲ್ಲಿ ನಡೆಯರು, ಒಬ್ಬರು ಹಿಡಿದ ಶೀಲವ ಹಿಡಿಯರು, ಒಬ್ಬರು ನುಡಿದ ಭಾಷೆಯ ನುಡಿಯರು ಅದೇನು ಕಾರಣವೆಂದಡೆ ತಮ್ಮ ಲಿಂಗ ಮೆಚ್ಚುವಂತೆ ನುಡಿದರು ಇದು ಕಾರಣ ಅಖಂಡೇಶ್ವರಾ ನಿಮ್ಮ ಶರಣರು ಪರಮ ಸ್ವತಂತ್ರಶೀಲರು" ಒಟ್ಟಿನ ಮೇಲೆ ನಮಗೆ ಕಣ್ಣಿಗೆ ಕಾಣಿಸದ ಚರಾಚರ ಜಗತ್ತಿನ ಸೃಷ್ಟಿ ಶಿಥಿಲಯಗಳಿಗೆ ಕಾರಣ ವಾದ ಒಂದು ಶಕ್ತಿ ಇದೆ ಎಂದು ನಾವೆಲ್ಲ ಒಪ್ಪತಕ್ಕದ್ದೇ. ಅದಕ್ಕೇ ದೈವಿಶಕ್ತಿ ಎಂದು, ಅದೃಷ್ಟವೆಂದು, ಪರಬ್ರಹ್ಮವೆಂದು, ಚಿತ್‌ಶಕ್ತಿಎಂದೂ ಅನೇಕ ಧಾರ್ಮಿಕರು, ದರ್ಶನಕಾರರು, ಸಿದ್ಧಾಂತಿಗಳು, ವೇದಾಂತಿಗಳು ಹೇಳುತ್ತಾರೆ ಪ್ರತಿಯೊಂದು ಮತದ ಸಿದ್ಧಾಂತಗಳು ಬೇರೆ ಬೇರೆಯಾದರೂ ನಿಜವಾದ ಇರುವಿಕೆ ಮಾತ್ರ ಒಂದೇ ಅದೇ ಸತ್ಯ ಲೋಕವ್ಯವಹಾರಗಳನ್ನೊದ್ದು ಕ್ಷಣ ಕಾಲವಾದರೂ ಅಲೌಕಿಕ ಸತ್ಯದ ಶೋಧನೆಯಲ್ಲಿ ನಿಶ್ಚಯಾಂಶವಾಗಿದ್ದೇ ಸತ್ಯ. ಈ ಜಗತ್ತು ಕೇವಲ ಪರಮಾನುಗಳಿಂದ ಕೂಡಿ ಸಂಯೋಗ ವಿಯೋಗಗಳೆಂಬ ವಿಕಾರಕ್ಕೆ ಬಲಿಯಾಗಿದೆ. ಪ್ರಕೃತಿಯ ವಶದಿಂದ ಕ್ಷಣಕ್ಷಣಕ್ಕೂ ನಾಶತ್ವ ಹೊಂದುವದು ಪ್ರತಿರೂಪಾಂತರವಾಗುವದು ಸೃಷ್ಟಿಯ ಲಕ್ಷಣ ಇಂದು ಸಜೀವ ವಿದ್ದ ದೇಹ ನಾಳೆ ಸತ್ತು ಮಣ್ಣಾಗುತ್ತದೆ, ಮಣ್ಣೇಮಡಿಕೆಯಾಗುತ್ತದೆ ಎಲ್ಲಾ ಮಿಥ್ಯವೆ ಆದ್ದರಿಂದ ಅಧ್ಯಾವಂತೇಚ ಯನ್ನಾಸ್ತಿ ।

ಮಧ್ಯೇ ತವಾಪಿ ... ತತ್ತ್ಥಾ ।

CC-0. Jangamwadi Math Collection. Digitized by eGangotri

ಎಂದು ಮಾಂಡೂಕ್ಯ ಕಾರಿಕೆಯು ಹೇಳಿರುತ್ತದೆ.
ಅಂದರೆ ಈ ಜಗತ್ತು ಆದಿಯಲ್ಲಿ ಇಲ್ಲ ಅಂತ್ಯದಲ್ಲಿ ಉಳಿಯುವದಿಲ್ಲ ವರ್ತಮಾನ ಅಂದರೆ ಮಧ್ಯ ಕಾಲದಲ್ಲಿ ತೋರಿ ಅಡಗುತ್ತದೆ. ಆದ ಕಾರಣ ಜಗತ್ತು ಮಿಥ್ಯೆ.

ಬದಲಾಗಿ ಇರುವಿಕೆಯೆಂಬುದೇ ಸತ್ಯ ಆದಿಯಲ್ಲಿದ್ದುದೆ ಮಧ್ಯದಲ್ಲಿ ಇರುತ್ತ ಅಂತ್ಯದಲ್ಲೂ ಇರುವದು ಅಂದರೆ ತ್ರಿಕಾಲಾ ಬಾಧಿತವಾದ ವಸ್ತುವೇ ಸದ್ರೂಪು. ಇದು ಕೇವಲ ಒಂದೇ ಒಂದು ಅಂದರೆ ಸ್ವಗತಾದಿ ಭೇದರಹಿತ ವಾಗಿದೆ. ಇವನ್ನೇ ಉಪನಿಷತ್ಕಾರರು ''ಏಕಮೇವಾ ದ್ವಿಯಂ ಬ್ರಹ್ಮ'' ಎಂದು ಹೇಳಿದರು. ಒಬ್ಬೊಬ್ಬರು ಒಂದೊಂದು ವಿಧವಾಗಿ ಹೇಳಿದರು ಒಬ್ಬರ ಮನೊ ವ್ಯಾಧಿಗೆ ತಕ್ಕಂತೆ ಒಂದೊಂದು ಮದ್ದು ಬೇಕಲ್ಲವೆ ಸ್ವಭಾವಕ್ಕನುಸರಿಸಿ ಒಬ್ಬೊಬ್ಬರಿಗೆ ಒಂದೊಂದು ತೆರನಾದ ಉಡಿಗೆ ತೊಡಿಗೆ ಬೇಕಾದಂತೆ ಬಸವಣ್ಣ ನವರು ಕೂಡಾ ''ಮನದಲ್ಲಿ ಭೇದವಲ್ಲದೆ ವಸ್ತುವಿನಲ್ಲಿ ಭೇದವಿಲ್ಲವಯ್ಯಾ ರೂಪ ರೂಪದಲ್ಲಿ ಭೇದವಲ್ಲದೆ ಚೈತನ್ಯದಲ್ಲಿ ಭೇದವಿಲ್ಲವಯ್ಯಾ ನಾಮನಾಮದಲ್ಲಿ ಭೇದವಲ್ಲದೆ ಶಾಸ್ತ್ರದಲ್ಲಿ ಭೇದವಿಲ್ಲವಯ್ಯಾ ಕ್ರಿಯೆಕ್ರಿಯೆಯಲ್ಲಿ ಭೇದವಲ್ಲದೆ ನಮ್ಮ ಶರಣರಲ್ಲಿ ಭೇದವಿಲ್ಲೆಂದಾತ ಕೂಡಲಸಂಗಮದೇವಾ" ಎಂದು ಹೇಳಿದ್ದಾಗೆ. ಹೀಗೆಲ್ಲಾ ಪ್ರಪಂಚದ ಕೋಟಿಕೋಟಿ ಜನಗಳ ಸಂಕಷ್ಟ ನಿವಾರಣೆಗಾಗಿ ಸಂಕಲ್ಪ ವಿಕಲ್ಪಗಳ ದೂರಿಕರಿಸುವದಕ್ಕಾಗಿ ಅನೇಕ ಮಹಾತ್ಮರು, ಶರಣರು. ಸತ್ಪುರು ಷರು ಅನೇಕ ತೆರನಾಗಿ ಜೀವ ಭ್ರಾಂತಿಯು ಬಿಡಿಸಿ ತಮ್ಮದೇ ಆದ ಧ್ಯೇಯ ಸಾಧನೆಯಲ್ಲಿ ನಿರ್ಧಿಷ್ಟ ಗುರಿ ಸಾಧಿಸಿಕೊಂಡು ಮುಂದಿನ ಪೀಳಿಗೆಗೆ ಮಾರ್ಗ ದರ್ಶಕರಾಗಿದ್ದಾರೆ. ಆದರಂತೆ ಕಾಡಸಿದ್ಧ ಶ್ರೀಗಳ ಪ್ರತಿಯೊಂದು ಕ್ರಿಯೆ ಗಳು ಜನತೆಗೆ ಅಲೌಕಿಕ ಘಟನೆಗಳಾಗಿ ಅನೇಕ ಅಚ್ಚರಿಯಾಗಿ ಕಾಣುತ್ತಿದ್ದವು ಸೂಳೀಕೇರಿಯಲ್ಲಿ ಪಟ್ಟಾಧಿಕಾರಿಯಾಗಿದ್ದ ಚನ್ನಬಸವ ಸ್ವಾಮಿಗಳು ಹೆಚ್ಚಾಗಿ ಶ್ರೀಗಳಲ್ಲಿ ನಿಷ್ಠೆ ಇಟ್ಟು ಇಲ್ಲಿಯೇ ಇರುತ್ತಿದ್ದರು ಲೋಕದಲ್ಲಿ ಮಾನವ್ಯದ ಮಂದಾರ ಪುಷ್ಪವಾಗಿ ವೀರಶೈವ ಸಮಾಜಕ್ಕೆ ಜನ ಜಗತ್ತಿಗೆ ತಮ್ಮ ಸುಮ ಧುರ ಸುವಾಸನೆ ಬೀರಿ ಪುರಾತನ ಶರಣ ಶ್ರೇಷ್ಠರಂತೆ ಇವರು ಕೂಡಾ ಶ್ರೇಷ್ಠತೆ ಪಡದವರೆಂದು ಹೇಳಿದರೆ ಇದೇನು ಹೊಗಳಿಕೆಯು ಮಾತಲ್ಲ. ಇಲ್ಲಿ ಸುಪ್ರಸಿದ್ಧ ಸಾಹಿತಿಗಳಾದ ಡಿ.ವ್ಹಿ.ಜಿ. ಯವರ ( ಮಂಕುತಿಮ್ಮನಕಗ್ಗದೊಳಗಿನ ) ಒಂದೆರಡು ಮಾತುಗಳಿಂದ ತಿಳಿಯಬಹುದು ನಾನೆಂಬುದೊಂದಂಶ ವಿಶ್ವದಿಗವೊಂದಂಶ ನಾನು

CC-0. Jangamwadi Math Collection. Digitized by eGangotri

ನೀನುಗಳಳಿದ ಸದ್ವೈಕ್ಯವೊಂದು ಧ್ಯಾನಿಸಂತೃಕ್ಯವನು ಪಾಲಿಸ್ವವದು ಘನ
ವನು, ಜಾಣ ನಾ ನಾಟಕವೋ ಮಂಕು ತಿಮ್ಮ"

"ಹುಲ್ಲಾಗು ಬೆಟ್ಟದಡಿ ಮನೆಗೆ ಮಲ್ಲಿಗೆಯಾಗು, ಕಲ್ಲಾಗು ಕಷ್ಟಗಳ
ಮಳೆಯ ವಿಧಿ ಸುರಿಯೆ, ಬೆಲ್ಲ ಸಕ್ಕರಿಯಾಗು ದೀನ ದುರ್ಬಲರಿಗೆ ಎಲ್ಲರೊಳು
ಒಂದಾಗು ಮಂಕುತಿಮ್ಮ" ಹೀಗೆ ನಮ್ಮ ಆಧುನಿಕ ಸಾಹಿತಿಗಳು ಕೂಡಾ
ಆಧ್ಯಾತ್ಮಿಕ ರಂಗಕ್ಕೆ ತಮ್ಮ ಹೊಸ ಹೊಸ ಸಾಹಿತ್ಯ ಸಂಪತ್ತಿನಿಂದ ಅನೇಕ
ತೆರನಾಗಿ ಅಮೂಲ್ಯವಾದ ಕೊಡುಗೆಗಳನ್ನು ಕೊಟ್ಟಿದ್ದಾರೆ. ಕನ್ನಡ ನಾಡಿನ
ಆಧ್ಯಾತ್ಮಿಕ ಶ್ರೀ ಸಂಪತ್ತು ಗಣನೀಯವಾಗಿ ಬೆಳೆದು ನಿಂತಿದೆ. ಭೋಗ ಜೀವನದಲ್ಲಿ
ಬೇಸತ್ತ ಪರರಾಷ್ಟ್ರಗಳು ಇಂದು ಕನ್ನಡ ನಾಡಿನ ಆಧ್ಯಾತ್ಮ ಶಕ್ತಿಗೆ ಶರಣಾಗುತ್ತ
ನಡೆದಿವೆ. ವಿನಾಶದ ಹಾದಿಯಲ್ಲಿ ವಿಜ್ಞಾನವು ವಿಕಾಸವಾಗುತ್ತಹೋದರು
ಅದನ್ನು ತಡೆಗಟ್ಟಬಲ್ಲ ಆತ್ಮಶಕ್ತಿ ಕನ್ನಡ ನಾಡಿನ ಆಧ್ಯಾತ್ಮಶಕ್ತಿಯಲ್ಲಿದೆ.
ವಿಶ್ವಕ್ಕೇನೆ ಅಮರ ಅಜೇಯ ಧೀ ಶಕ್ತಿಯನ್ನೊದಗಿಸುವ ಮಹಾತಾತ್ವಿಕ ಶಕ್ತಿಯೂ
ಕನ್ನಡನಾಡಿಗುಂಟು ವರಕವಿ ಬೇಂದ್ರೆಯವರು ಕೂಡಾ "ಕನ್ನಡ ಕಾಯಕದಲ್ಲಿಲ್ಲವು
ಕಮ್ಮಿ ಜಾಸ್ತಿ, ಜಗದೇಳಿಗೆ ಯಾಗುವದಿದೆ ಕರ್ನಾಟಕದಿಂದ, ಇದನ್ನೊಪ್ಪದ
ಹೆರವ ಅವರಿದ್ದರೂ ಒಂದೇ ಸತ್ತರೂ ಒಂದೇ "ಎಂದು ಕೈಸಾರಿ ಹೇಳಿದ್ದಾರೆ
ನಾಡಿನ ತುಂಬೆಲ್ಲಾ ಶರಣರ-ಸಂತರ ಅನೇಕ ಸಿದ್ಧಿಪುರುಷರ ಲೀಲಾಮಹಾತ್ಮರ
ತಾತ್ವಿಕ ಪದ್ಯಗಳಿಂದಲೂ ವಚನಕಾರರ ಅನುಭವಿಕ ವಚನಗಳಿಂದಲೂ ಸ್ತ್ರೀ
ಪುರುಷರೆಂಬ ಭೇಧವಿಲ್ಲದೇ ಅವರು ತೋರಿದ ದಿವ್ಯ ಸಂದೇಶಗಳಿಂದಲೇ ಬಾಳಿ
ಬದುಕುತ್ತಲಿದೆ ನಾಡಿನ ಜನ ಅದರಲ್ಲೂ ವೀರಶೈವ ಧರ್ಮದ ದಾರ್ಶನಿಕರು
ಪೀಠಾಧಿಕಾರಿಗಳು ಅನೇಕ ಬಗೆಯ ಅಪರಂಪಾರ ದುಡಿಮೆಯಿಂದ ಶಿಕ್ಷಣ
ಕ್ಷೇತ್ರದಲ್ಲಿ ರಾಜಕೀಯದಲ್ಲಿ ಸಾಮಾಜಿಕ ಕ್ಷೇತ್ರದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ
ತಮ್ಮ ಸತ್ವಪೂರ್ಣ ಕೃತಿಗಳಿಂದ ಜನರ ಬದುಕನ್ನು ಬೆಳಗಿಸಿದ್ದಾರೆ ಬೆಳಗಿಸುತ್ತ
ಮುಂದಾಗಿದ್ದಾರೆ ಮನುಷ್ಯ ನೂರುವರುಷ ಬಾಳಿದರೂ ಸಾವಿರ ವರುಷ
ಬದುಕಿದರೂ ಸಾವುಮಾತ್ರ ತಪ್ಪಿದ್ದಲ್ಲ. ದೀರ್ಘವಾದ ಬದುಕು ಪ್ರಮುಖವಲ್ಲ
ಅವರು ಆಚರಿಸಿ ಅನುಗ್ರಹಿಸಿದಾ ತತ್ವಗಳು ಪ್ರಮುಖ ಇದ್ದೂ ಇಲ್ಲ
ದಂತಿರುವದಕ್ಕಿಂತ ಕೆಲವೇ ವರುಷಗಳಲ್ಲಿ ಇಲ್ಲದಂತಾದರೂ ಇದ್ದಂತೆ ಬಾಳಿದಾ
ಸದಾಕಾಲ ಅವರ ಸ್ಮೃತಿಯನ್ನು ಬಿಟ್ಟವರೇ ಮಹಾತ್ಮರು, ಅಮರರು.

CC-0. Jangamwadi Math Collection. Digitized by eGangotri

ಅದರಂತೆ ಕಾಡಸಿದ್ಧ ಶ್ರೀಗಳಿಗೆ ತಾವು ಮಾಡಬೇಕೆಂದ ಕಾರ್ಯಗಳೆಲ್ಲವೂ ಸಫಲಗೊಂಡಂತಾಗಿವೆ ಎಂದು ಆತ್ಮಕ್ಕೆ ಸಂತೃಪ್ತಿಯಾಗಿದೆ. ಅಲ್ಲದೇ ಪಂಚಾಚಾರ್ಯಪೀಠದ ತಮ್ಮ ಮೂಲಸ್ಥಾನಕ್ಕೆ ನೂತನ ಜಗತ್ತಿಗೆ ನೂತನ ವಾತಾವರಣದಲ್ಲಿ ವೀರಶೈವ ಧರ್ಮಕ್ಕೆ ಜನ ಜಗತ್ತಿಗೆ ಉದ್ಧಾರ ಕರ್ತರೊಬ್ಬರನ್ನು ಅಂತರಂಗದಲ್ಲಿ ಅರಿತುಕೊಂಡರು, ಶಿವಪೂಜೆಗೆಂದು ಒಂದು ದಿನ ಅಮೀನಗಡದ ಭಕ್ತನಮನೆಗೆ ಹೋದಾಗ ಒಂದು ಘಟನೆಯೂ ಜರುಗಿತು. ಇಷ್ಟಲಿಂಗದಲ್ಲಿ ಏಕಾಗ್ರಚಿತ್ತದಿಂದ ಪೂಜಿಸುವಾಗ ಹಸ್ತದೊಳಗಿನ ಲಿಂಗವು ಭೂಮಿಗೆ ಬಿದ್ದಿತಂತೆ "ಓಹೋ ಇನ್ನು ಶಿವನು ನನ್ನಿಂದ ಪೂಜೆಯನ್ನು ಸ್ವೀಕರಿಸುವಂತೆ ಕಾಣುವದಿಲ್ಲ ಹಾಗಿದ್ದರೇ ಶಿವ ಪೂಜೆಯನ್ನು ಬಿಟ್ಟು ನಮ್ಮ ಜೀವ ಕೂಡಾ ಇನ್ನು ಇರಲಾರದು. ಅಹುದು, ಜೀರ್ಣವಾದ ಶರೀರವನ್ನು ಜೀವನು ಕೆಲವೇ ದಿನಗಳಲ್ಲಿ ಬಿಡಬಹುದು" ಎಂದು ಮುಂದಿನ ಸೂಚನೆಯನ್ನು ಅರಿತವರಾಗಿ ಆತ್ಮವಂಚಿತರಾಗದೆ ಭಕ್ತರಿಗೆ ಹೇಳಿದರಂತೆ ಹಣ್ಣೆಲೆ ಉದುರುವದು ಹಸಿರೆಲೆ ಚಿಗಿಯುವದು ನೈಸರ್ಗಿಕ ನಿಯಮ ಅನರಂತೆ ಶ್ರೀಗಳು ಪಂಚಾಚಾರ ಪ್ರಧಾನ-ರಾಗಿ ಷಟಸ್ಥಲ ಬ್ರಹ್ಮಿಗಳಾಗಿ ಅಷ್ಟಾವರಣ ಸಂಪನ್ನರಾಗಿ, ಸಮಾಜದ ಉನ್ನತಿಗಾಗಿ ನಾಡಿನ ಹಿತಕ್ಕಾಗಿ ಹಗಲಿರುಳು ತ್ರಿಕರಣ ಪೂರ್ವಕವಾಗಿ ಶ್ರಮಿಸಿ ತಮ್ಮ ತಪಸ್ಸಿನ ಶಕ್ತಿಯಲ್ಲಾ ಧಾರೇಯೆರೆದು ತಮ್ಮ ಜೀವನದಿಯನ್ನು ತಾರೀಖು ೧೮-೪-೧೯೫೮ ನೇ ದಿವಸ ಬ್ರಹ್ಮ ಎಂಬ ಸಮುದ್ರದಲ್ಲಿ ಸೇರಿಸಿದರು, ಲಿಂಗ ದೇಹವನ್ನು ಲಿಂಗೈಕ್ಯಗೊಳಿಸಿದರು. ಹರನಾಣತಿಯಿಂದ ಧರೆಗೆಬಂದು ಗುರುಪೀಠದಿನಿಂದು ಜರೆಮರಣಗಳಂಗೆಲಿದು ಶರಣ ಕುಲನೇಸರನೆಂಬಂತೆ ಕಾಮಿತ ಭಕ್ತರಿಗೆ ಕಲ್ಪತರುವೆಂಬಂತೆ ನಿಜದ ನಿಲಯದಲ್ಲಿ ನಿಶ್ಚಿಂತರಾದರು ಶಿವಯೋಗದಲ್ಲಿ ಶಿವಾಧೀನರಾದರು.

ಗುಳೇದಗುಡ್ಡದ ಸದ್ಭಕ್ತರು ಸುತ್ತಮುತ್ತಲಿನ ಗ್ರಾಮದವರೂ ಮುರಡಿಮಠದಲ್ಲಿ ಶ್ರೀಗುರು ಕಾಡಶಿದ್ಧರ ಅಂತ್ಯ ಕ್ರಿಯೆಯನ್ನು ವಿಧಿವತ್ತಾಗಿ ನೆರವೇರಿಸಿದರು. ಮತ್ತೂ ಅವರ ಗದ್ದುಗೆಯನ್ನು ಸಹ ಕಟ್ಟಿಸಿದರು ಅಂದರೆ ಹಡಗಲಿ ಮುಗಳೊಳ್ಳಿಯ ಮುರಡಿ ಮಠಕ್ಕೆ ಮುಂದೆ ಇಪ್ಪತ್ತು ವರುಷದ ವಿರಕ್ತ ವೈರಾಗ್ಯದ ವಿಶಾಲ ತೇಜಃ ಪುಂಜವಾದ ಅಕ್ಷರಾಭ್ಯಾಸ ಸಾಕಷ್ಟು ಕಲಿಯದಿದ್ದರೂ ಲಕ್ಷಸಾಧನದಿಂ ಮೋಕ್ಷರಕ್ಷರದ ನಿಜ ನಿಲುವರಿತ ಸದಾ ಹರ್ಷಾತಿಶಯದಿ ನಗುಮೊಗದ ಪ್ರಶಾಂತ ಲೀಲಾಕಾರಶಬ್ಧರು ಇವರೇ ಎನ್ನು-

CC-0. Jangamwadi Math Collection. Digitized by eGangotri

ವಂತಹ ನಾಮಾಂಕಿತರಾಗಿ ಹತ್ತನೆಯುವರಾಗಿ ಪಟ್ಟಾಧಿಕಾರಿಗಳಾದರೂ ತಂದೆ ಸಿದ್ದಲಿಂಗಯ್ಯ ತಾಯಿ ಬಸವಾಂಬೆಯ ಪವಿತ್ರ ಶರಣ ದಂಪತಿಗಳ ಹೊಟ್ಟೆ ಯಿಂದ ರೇಣುಕಾರಾಧ್ಯರು ತಾ 2-1-1938 ರಲ್ಲಿ ಜನಿಸಿದರು. ಎಂಟನೇ ವರುಷದಲ್ಲಿ ನಮ್ಮ ಹಿಂದಿನ ಶ್ರೀಗಳಾದ ಕಾಡಸಿದ್ಧರಿಂದ ಉಪನಯನ ಲಿಂಗ ದೀಕ್ಷೆ ಅಯ್ಯಾಚಾರಗಳನ್ನು ವಿಧಿಯುಕ್ತವಾಗಿ ಪೂರೈಸಿಕೊಂಡಿದ್ದರು ಬಾಲಕ ನಲ್ಲಿದ್ದ ಅಗಾಧವಾದ ಅಪ್ರತಿಮವಾದ ಕ್ರಿಯಾಚರಣೆಗಳ ಕಂಡು ತಮ್ಮ ಮುಂದಿನ ಉತ್ತರಾಧಿಕಾರಿಯಾಗಿ ಬೆಳಗಲು ಶ್ರೀಗಳು ತುಂಬು ಹೃದಯದಿಂದ ಆಶೀರ್ವಾದ ಮಾಡಿರಬೇಕು ಹದಿನಾರರ ತಾರುಣ್ಯ ಅವಸ್ಥೆಯಲ್ಲಿ ತಂದೆತಾಯಿ ಗಳು ಹುಡುಗನಿಗೆ ಮದುವೆಯನ್ನು ಮಾಡಿ ಗೃಹಸ್ಥನನ್ನಾಗಿ ಮಾಡಬೇಕೆಂದು ವಿಚಾರಿಸಿದರೆ ಒಪ್ಪಲಿಲ್ಲ ಎಷ್ಟು ಬಗೆಯಿಂದ ಕೇಳಿದರೂ ಹಟವಾದಿಗಳಾಗಿ ದಿಟದ ಒಂದೇ ಉತ್ತರ "ನನಗೆ ಮದುವೆಯೇ ಬೇಡ" ಅಬ್ಬಬ್ಬಾ ! ಕುಲ ಪುತ್ರನ ನುಡಿಗೆ ಹಡೆದವರು ತಳಮಳಿಸಿದರೂ "ನಮಗೆ ದಕ್ಕದಿದ್ದರೂ ಸರಿ ಜಗತ್ತಿಗಾದರೂ ದಕ್ಕಿದರೆ ಸಾಕು" ಎಂದು ಅವನ ಪಾಡಿಗೆ ಅವನನ್ನು ಬಿಟ್ಟು ಬಿಟ್ಟರು ಜೀವನದಲ್ಲಿ ನಿರ್ದಿಷ್ಟವಾದ ಗುರಿ ಸಾಧಿಸುವ ಸತತ ಪ್ರಯತ್ನ ರೇಣುಕಾರಾಧ್ಯರಿಗೆ ಬಾಲ್ಯದಿಂದಲೂ ಮೈಗೂಡಿತ್ತು, ಇನ್ನು "ಉರಿವ ಕೆಂಡ ಹುಲ್ಲನ್ನು ಕ್ಷಣಮಾತ್ರದಲ್ಲಿ ನುಂಗುವಂತೆ ತನುವೆಂಬ ತೃಣವನ್ನು ಗುರು ಚರಣ ಕರ್ಪಿಸಿದರೆ ಆ ತನುವಿನ ಸರ್ವಾಂಗವೂ ಲಿಂಗಮಯ" ಎಂಬ ದೇವರ-ದಾಸಿಮಯ್ಯನವರ ವಚನದಂತೆ ಧರ್ಮದ ಜಾಗೃತಿಗಾಗಿ ಸಮಾಜದ ಉನ್ನತಿಗಾಗಿ ಹತ್ತನೆಯ ಪೀಠಾಧಿಪತಿಗಳಾದ ರೇಣುಕಾರಾಧ್ಯರು [ ಶ್ರೀ ಕಾಡಶಿದ್ದರು ] ತಮ್ಮ ಅನಂತ ಅನುಷ್ಠಾನದ ಶಕ್ತಿಯನ್ನು ಧಾರೆಯೆರೆಯುತ್ತಲಿದ್ದಾರೆ, ಚರಿತ್ರೆಗೆ ಕೊನೆಯಲ್ಲಿದ್ದ ಅಂದರೆ ಈಗ ನಮ್ಮೆಲ್ಲರ ಸಮ್ಮುಖದಲ್ಲಿ ತಮ್ಮ ಪ್ರಶಾಂತ ನಗುಮೊಗದ ಕಳೆಯಿಂದ ಎಂಥವರಿಗಾದರೂ ಆನಂದವಾಗುವ ಶ್ರೀಗಳನ್ನು "ಬುದ್ದೀ ಸಾಧ್ಯವಿದ್ದಷ್ಟು ತಮ್ಮ ಜೀವನದ ಕೆಲವು ಮಾಹಿತಿ ಹೇಳಿ" ಎಂದು ಕೇಳಲು ಅವಕ್ಕವರು, "ಬ್ಯಾಡಪ್ಪಾ ನಾವೆನಂಥ ಮಹಾತ್ಮರು ನಾವಿರುವ ವರೆಗೂ ನಮ್ಮದನ್ನು ಹೇಳಬಾರದು ತಿಳಿದುದನ್ನು ನೀವೆ ಬರೆಯಿರಿ ಗುರುವಿನ ಗುಣಗಾನ ಒಂದೇ ನಮ್ಮ ಪರಮ ಕರ್ತವ್ಯ" ಎಂದರು ಎಷ್ಟೊಂದು ವಿನಯ ನಮ್ರತೆ ಒಂದೊನ್ನು ಮಠದಿಂದ ಯಾರಿಗೂ ಹೇಳದೆ ಕೇಳದೆ ಗುಳೇದಗುಡ್ಡದ ಹಳ್ಳವನ್ನುದಾಟಿ ಮುಂದೆ ಬೆಟ್ಟದ ಸಾಲಿನ ಮಧ್ಯದ ಹುಲಿಗೆಮ್ಮನ ಕೊಳ್ಳದಲ್ಲಿ

CC-0. Jangamwadi Math Collection. Digitized by eGangotri

ನಿಸರ್ಗ ಸುಂದರವಾದ ಸ್ಥಾನದಲ್ಲಿ ಮೌನಧಾರಿಗಳಾಗಿ ಶಿವಪೂಜೆ ಲಿಂಗಾರ್ಚಣೆ ಗಳಲ್ಲಿ ತಾವೆತಾವಾಗಿ ನಾಲ್ವತ್ತೆರಡು ದಿವಸ ಶಿವಯೋಗ ಸಾಮ್ರಾಜ್ಯದಲ್ಲಿ ವಿಹಾರಿಗಳಾಗಿ ಅನುಷ್ಠಾನದ ತೃಪ್ತಿಪಡೆದರು ಮತ್ತೊಮ್ಮೆ ಕಲ್ಲಾಪೂರದಲ್ಲಿಯೂ ೪೨ ದಿವಸ ಅನುಷ್ಠಾನ ತತ್ಪರರಾಗಿ ಮೌನಲೋಕದ ಬೆಳಕನ್ನು ಸಾಕ್ಷಾತ್ಕರಿ-ಸಿಕೊಂಡು ಸಿದ್ಧಹಸ್ತರಾದರು ಬುದ್ಧಿಯು ತಾರ್ಕಿಕ ಶಕ್ತಿಗೆ ನಿಲುಕದ ಸ್ವಯಂ ಪ್ರಕಾಶಿತ ಜ್ಞಾನಾನಂದದಿಂದ ಜಗತ್ತನ್ನೂ ಸಮಾಜವನ್ನೂ ತಿದ್ದಿ ಉದ್ಧರಿಸಬಲ್ಲ ಶಿವಾನುಭವಿಗಳಾದರು, ಹತ್ತು ಹನ್ನೆರಡು ವರುಷಗಳ ಪರಿಯಂತ ಗುರುವಿನ ಪುಣ್ಯಾರಾಧನೆಯ ಕಾಲದಲ್ಲಿ ಅನೇಕ ಹಿರಿಯ ಪೀಠಾಧಿಕಾರಿಗಳನ್ನು ಬರ-ಮಾಡಿಕೊಂಡು ಶಿವಾನುಭವ ಶಿವಸಂಕೀರ್ತನೆ ವೀರಶೈವಧರ್ಮದ ಮೂಲ ತತ್ವಗಳಾದ ಪಂಚಾಚಾರ ಷಟ್‌ಸ್ಥಲ ಅಷ್ಟಾವರ್ಣ ಮುಂತಾದ ಅನೇಕ ವಿಚಾರಗಳಿಂದ ನೂತನ ಜಗತ್ತಿಗೆ ಹೊಂದಿಕೆಯಾಗುವಂತೆ ವಿಚಾರ ಸಂಕೀರ್ಣ-ಗಳಿಂದ ಜನತೆಯನ್ನು ಜಾಗೃತಗೊಳಿಸುತ್ತ ಶ್ರೀ ಮಠದ ಕೀರ್ತಿಗೆ ಕಲಶ ಪ್ರಾಯರಾದರು, ಎಷ್ಟೋ ಧಾರ್ಮಿಕ ಸಭೆಗಳಿಗೆ ಹೋದರು ಯಾವ ಸಮಾರಂಭದ ಸಭೆಯ ಅಧ್ಯಕ್ಷಸ್ಥಾನವಹಿಸಿದರು ಒಂದೆರಡುಮಾತು ಹೇಳಿದವರಲ್ಲ ಆಶೀರ್ವಚನ ಗಳ ಕಿರುಭಾಷಣವೂ ಇಲ್ಲ ಕೇವಲ ಹಸನ್ಮುಖಭಾವದ ತೃಪ್ತಿಯ ಮೌನಲಕ್ಷಣವೇ ಎಲ್ಲರನ್ನು ಮಾತನಾಡಿಸುವಂತಿತ್ತು, ಮಾತನಾಡುವಂತಿತ್ತು ಶ್ರೀಗಳವರ ಹೆಗ್ಗಳಿಕೆ ಬರೆಯಬಾರದೆಂದು ನನಗೆ ಅವರಿಂದ ಅಪ್ಪಣೆಯಾಗಿದ್ದರೂ ನನ್ನ ಅಂತಃಪ್ರೇರಣೆಗೆ ಅಡ್ಡಿಮಾಡಿ ಆತ್ಮ ವಂಚನೆ ಮಾಡಕೊಳ್ಳುವ ಸ್ವಭಾವವೂ ನನ್ನದಲ್ಲ ೮-೧೦ ವರುಷಗಳ ನಮ್ಮ ಅವರ ಸಂಪರ್ಕದ ಸವಿನೆನಪೇನಾಟ್ಯ ಸಾಹಿತಿಯಾದ ಕಿರಿಯ ಬರಹಗಾರನಿಗೆ ಇದನ್ನುಕೂಡಾ ಬರೆಯಲು ಕಾಡಶಿದ್ದ ಶ್ರೀಗಳೇ ಪ್ರೇರೇಪಿಸಿದ್ದಾರೆಂದು ಹೇಳಬಲ್ಲೆ

ಗುಳೇದಗುಡ್ಡದ ನಗರ ಪ್ಪಮೂವತ್ತು ಸಾವಿರ ಜನಸಂಖ್ಯೆಯುಳ್ಳ ನೇಕಾರಿಕೆ ಮತ್ತು ಒಕ್ಕಲುತನಗಳ ಪ್ರಮುಖ ಉದ್ಯೋಗದ ಕೇಂದ್ರ ಸ್ಥಾನ ಇತ್ತಿತ್ತಲಾಗಿ ಅನೇಕ ಉದ್ಯೋಗಗಳು ತಲೆಎತ್ತಿವೆ, ಆದರೂ ಗುಳೇದಗುಡ್ಡದ ಖಣ ಇಲಕಲ್ಲ ಶೀರೆ ಎಂದರೆ ಕರ್ನಾಟಕ ಮಹಾರಾಷ್ಟ್ರದಲ್ಲಿ ಅಷ್ಟೇಅಲ್ಲ ಪರರಾಷ್ಟ್ರ ಗಳ ಮಾರುಕಟ್ಟೆಯಲ್ಲೂ ಪ್ರಸಿದ್ಧಿ ಪಡೆದಿವೆ, ಗುಳೇದಗುಡ್ಡದ ಹೆಸರೇ ಗೊತ್ತಿ ರದ ಒಂದಾನೊಂದು ಕಾಲದಲ್ಲಿ ಗುಸನತ್ತ ಗಣಾಚಾರಿಯವರು

CC-0. Jangamwadi Math Collection. Digitized by eGangotri

ತಮ್ಮ ನಾಟ್ಯ ಸೇವೆ ಸಂಗೀತ ಸೇವೆಯಿಂದಲೂ ನಾಲ್ಕುದಶಕಗಳ ಕಾಲ ಹರಿತಾದ ನಾಟ್ಯಸಾಹಿತ್ಯದಿಂದ ಮುಳುಗುರ್ತಿದ್ದ ರಂಗಭೂಮಿಯ ಕಲೆಯನ್ನು ಎತ್ತಿಹಿಡಿದು ಕೊನೆಯುಸಿರನವರೆಗೂ ದರಿದ್ರನಾರಾಯಣ ದತ್ತುಪುತ್ರರೇ ಎಂಬಂತೆ ಬಡತನದಲ್ಲಿಯೇ ಬದುಕನ್ನು ನೂಕಿದ ಹೆಸರಾಂತ "ಕರ್ನಾಟಕ ಶೇಕ್ಸಪಿಯರ" ಮತ್ತು "ಕವಿಕೇಸರಿ" ಎಂಬ ಪ್ರಶಸ್ತಿಗಳಿಸಿದ ಕಂದಗಲ್ಲ ಶ್ರೀ ಹಣಮಂತರಾಯರು ತಮ್ಮ ಸಾಹಿತ್ಯ ಶಕ್ತಿಯಿಂದಲೂ ಕನ್ನಡಿಗರ ಹೃದಯದಲ್ಲಿ ಗುಳೇದಗುಡ್ಡದ ಊರನ್ನು ಪರಿಚಯಮಾಡಿಸಿದ ಅಗ್ರಗಣ್ಯರು ಊರಿನ ಪಶ್ಚಿಮಕ್ಕೆ ಎತ್ತರವಾದ ಬೆಟ್ಟದ ಮೇಲಿದ್ದ ಪೂರ್ವಿಕರು ಕೆಳಗಿಳಿದು ಗುಳೇಹೊಕ್ಕು ಊರನ್ನು ಕಟ್ಟುತ್ತಾ ಬಂದಿದ್ದಕ್ಕಾಗಿ ಗುಳೇದಗುಡ್ಡವೆಂಬ ಹೆಸರು ರೂಢಿಯಲ್ಲಿ ಬಂದಿದೆ ಕೋಟೇಕಲ್ ದೇಸಾಯರ ಕುಲದೇವತೆಯಾದ ವಿಜಯಲಕ್ಷ್ಮೀಕೂಡಾ ಉತ್ತರದಿಕ್ಕಿನ ಗುಡ್ಡದ ಮೋಕು ಅಂದರೆ ಮೂಲೆಯಭಾಗದಲ್ಲಿ ನೆಲಸಿ ಮೋಕೇಶ್ವರಿಯಾಗಿ ಗ್ರಾಮದೇವತೆಯಾಗಿ ಶ್ರೀದೇವಿಯಾಗಿ ನೆಲಸಿದ್ದಾಳೆ ಊರಲ್ಲಿ ಶಾಲೆಗಳಿವೆ, ಹೈಸ್ಕೂಲಗಳಿವೆ ಕಾಲೇಜ ಇದೆ, ದೇವಸ್ಥಾನಗಳಿವೆ ಅನೇಕ ಅನೇಕ ಶರಣ ಸಂತರ ಮಠ ಮಾನ್ಯಗಳಿವೆ ನಾಗರಿಕರ ಅನೇಕ ಕುಂದು ಕೊರತೆಗಳಿದ್ದರೂ ಟೌನಮುನಸಿಪಾಲ್ಟಿಯೂ ಕಾರ್ಯನಿರ್ವಹಿಸುತ್ತದೆ. ಏನೇ ಇದ್ದರೂ ದಿನದಿಂದದಿನಕ್ಕೆ ಹದಗೆಟ್ಟು ಹೋಗುತ್ತಿರುವ ಇಂದಿನ ರಾಜಕೀಯ ವಾತಾವರಣದಲ್ಲಿ ನೀತಿತತ್ವ ಸಂಸ್ಕೃತಿಗಳ ದರ್ಶನವಿಲ್ಲದ ಶಿಕ್ಷಣ ಕ್ಷೇತ್ರದಲ್ಲಿ ಪ್ರತಿಯೊಬ್ಬರೂ ಧನವಂತರಾಗಬೇಕೆಂಬ ಅಪೇಕ್ಷೆಯಿಂದ ಆತ್ಮವಂಚಿತರಾಗಿ ಅನ್ಯಾಯ ಅನಾಚಾರ ಮೋಸ ವಂಚನೆಗಳನ್ನೇತಮ್ಮ ಕಾಯಕಮಾಡಿಕೊಂಡ ಇಂದಿನ ಸಾಮಾಜಿಕ ಜೀವನದಲ್ಲಿ ನಿಜವಾದ ಆಚಾರ ಗಳಿಲ್ಲದೆ ಢಾಂಬಿಕ ವಿಚಾರ ವೃತ್ತಿಯ ಸ್ವಾಮಿಗಳ ಮಠಾಧಿಪತಿಗಳ ಧಾರ್ಮಿಕರಂಗದಲ್ಲಿ ಒಟ್ಟಾರೆ ಎಲ್ಲ ಕ್ಷೇತ್ರಗಳಿಂದಲೂ ಜನ ಸಾಮಾನ್ಯರ ಬದುಕು ಸುಖಮಯವಾಗಿ ಸಾಗುತ್ತಿಲ್ಲ ಪಟ್ಟಭದ್ರ ಹಿತಾಸಕ್ತಿಗಳ ಕೈವಾಡ ಎಲ್ಲರಂಗದಲ್ಲೂ ಕೈಚಾಚಿ ಬಡವರು ಬಡವರಾಗುತ್ತಲೇ ಇದ್ದಾರೆ ಶ್ರೀಮಂತರು ಶ್ರೀಮಂತರಾಗುತ್ತಲೇ ಇದ್ದಾರೆ ಬದುಕಿನ ಆನಂದಕ್ಕಾಗಿ ಜೀವನದ ಧನ್ಯತೆಗಾಗಿ ಅನೇಕ ಮಹಾತ್ಮರು ಆಗಮಿಸಿದಾಗ ಅವರ ಕೃಪಾಶೀರ್ವಾದಕ್ಕಾಗಿ ಜನರು ತಂಡೋಪತಂಡವಾಗಿ ನೆರೆಯುವದು ನಮ್ಮೂರಿನ ಭೂಮಿಯ ಗುಣ ಆದರೇನು ? ಪುರಾಣ ವೈರಾಗ್ಯದಂತೆ ವಿಫಲವಾಗುವದೇ ಬಹಳ.

CC-0. Jangamwadi Math Collection. Digitized by eGangotri

ಹೀಗಿದ್ದ ನಾಗರಿಕ ಬಾಳಿನ ಅಸಮರ್ಥತೆಗೆ ಸಮರ್ಥರೊಬ್ಬರು ಬೇಕೆಂದು ಅನುಭಾವಿಗಳ ಅಂತರಂಗ ಕರೆಯುತ್ತಿತ್ತು ನೂತನ ತರುಣ ಪೀಳಿಗೆಗೆ ದೇವರು ಧರ್ಮಗಳ ನಿಜವಾದ ಅರ್ಥವನ್ನೇ ಅರಿಯದ ಯಾಂತ್ರಿಕ ಯುಗದ ಯುವಕ ಶಕ್ತಿಯ ಪ್ರಜ್ಞೆಯನ್ನು ಜಾಗ್ರತಗೊಳಿಸಲು ಹೊಸಪೇಟೆ ಭಕ್ತರು ಪ್ರತಿನಿತ್ಯ ಸಾಲೇಶ್ವರ ಶ್ರೀ ದೇವನನ್ನು ಸ್ಮರಿಸುತ್ತಿದ್ದರು. ಎಲ್ಲ ಮಠ ಮಾನ್ಯಗಳು ಶರಣ ಶರಣೆಯರ ಶಿವಾನುಭವ ಗೋಷ್ಠಿಗಳು, ಮೇಲಿನ ಪೇಟೆಯಲ್ಲಿಯೇ ಇವೆ ಅಲ್ಲಿಯೇ ನಡೆಯುತ್ತಿವೆ. ಊರಿನ ಕೆಳಗಡೆಯ ಭಾಗದ ಜನರು ಹತ ದೈವಿಗಳೆ ಎಂದು ಹೊಸಪೇಟೆಯ ಭೂದೇವಿ ಕೂಡಾ ತಪಸ್ವಿಗಳ ಪಾದ ಸ್ಪರ್ಶಕ್ಕಾಗಿ ಶಿವನಲ್ಲಿ ಮೊರೆಯಿಡುತ್ತಿದ್ದಳು ಹೀಗೆ ಜನರಅಂತರಂಗದ ಕರೆ ಭೂದೇವಿಯ ಮೊರೆ ಒಂದಾಗಿ ಆಗಾಗ ಶ್ರೀ ಕಾಡಸಿದ್ಧರ ಅಂತಃಕರುಣಕ್ಕೆ ಮುಟ್ಟುತ್ತಲೇ ಇತ್ತು "ಬುದ್ಧಿ ಕಾಡನ್ನು ನಾಡಿನಂತೆ ಪರಿವರ್ತಿಸಿ ಪುಣ್ಯಶ್ರಮದಂತೆ ಮಾಡಿದ ತಾವು ನಾಡಿನವರಲ್ಲಿದ್ದ ಕಾಡು ಗುಣಗಳನ್ನು ದೂರ ಮಾಡಲು ದಯವಿಟ್ಟು ತಾವು ಇಲ್ಲಯೇ ನೆಲೆಸಲು ಬರಲಾರಿರಾ" ಎಂಬ ಕಳಕಳಿಯ ಕೂಗು ತಟ್ಟುತ್ತಲೇ ಇತ್ತು.

"ಲೋಕಾನುಭವದಿಂದ ಅಷ್ಟು ದೂರವಿದ್ದು ಲೋಕೋಪಕ್ಕಾರಕ್ಕಾಗಿ ತಾವು ಸಾಧಿಸುವದು ಏನಿದೆ ? ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿದೆ. ಆದರೆ ನಮ್ಮ ಸ್ವಂತಿಕೆಯನ್ನು ಮರೆತು ಪರಕೀಯರ ನಕಲಾಗಿ ನಡೆಯುತ್ತಿರುವ ನಾವು ಸ್ವತಂತ್ರರೆ ? ನಮ್ಮ ಧರ್ಮ ನಮ್ಮ ಸಂಸ್ಕೃತಿ ಆಚಾರ ವಿಚಾರಗಳನ್ನು ತಿರಸ್ಕರಿಸಿ ಸ್ವೇಚ್ಛಾಚಾರಿಗಳಾಗಿ ವರ್ತಿಸುವ ನಾವು ಸ್ವತಂತ್ರರೇ ? ಅದಕ್ಕಾಗಿಯೇ ವೀರ ತಪಸ್ವಿಗಳಾದ ರಂಭಾಪುರಿ ಜಗದ್ಗುರುಗಳು "ಭೀತಿ ಇಲ್ಲದ ಶಾಸನ ನೀತಿ ಇಲ್ಲದ ಶಿಕ್ಷಣ, ಪ್ರೀತಿ ಇಲ್ಲದ ಜೀವನ ಸೀಮಾತೀತ ಸ್ವಾತಂತ್ರ್ಯ" ಇವೆಲ್ಲಾ ರಾಷ್ಟ್ರಕ್ಕೆ ವಿಷಜಂತು ಎಂದು ತಮ್ಮ ಸಿಂಹ ಧ್ವನಿಯಿಂದ ಎಚ್ಚರಿಕೆ ಕೊಟ್ಟಿಲ್ಲವೆ ಮಾನವ ಧರ್ಮಕ್ಕೆ ಜಯವಾಗಲಿ ಧರ್ಮದಿಂದಲೇ ವಿಶ್ವಕ್ಕೆ ಶಾಂತಿ ಎಂಬ ಹೊಸ ಕೂಗಿನಿಂದ ಲೋಕಕ್ಕೆ ಅಲೌಕಿಕ ಮಾರ್ಗದರ್ಶನ ಮಾಡಿಲ್ಲವೆ ? ಇತ್ಯಾದಿ ಪ್ರಶ್ನೆಗಳತ್ತ ನಿಸರ್ಗವು ಶ್ರೀಗಳ ಚಿತ್ತವನ್ನು ಸೆಳೆದಿತ್ತು. ನಿಮಿತ್ತ ಕಾರಣ ಕಾರಣವಾಗಿ ಮರಡಿಯ ಮಠದಲ್ಲಿ ಒಂದು ದಿನ ಕಳವು ಸಂಭವಿಸಿತು ಅದೇ ನೆಪದಿಂದ ಹೊಸಪೇಟೆಯ ಭಕ್ತರು ಬಹಳ ಒತ್ತಾಯ ಮಾಡಿ ತಾವಿತ್ತ ಸ್ಥಾನದಲ್ಲಿ ಇರಲಿಕ್ಕೆ ಬಿನ್ನವಿಸಿದರು ಎಲ್ಲವೂ ಶಿವನಿಚ್ಛೆ ಎಂದು ಪ್ರಸನ್ನತೆಯ

CC-0. Jangamwadi Math Collection. Digitized by eGangotri

ಪ್ರಶಾಂತ ಭಾವದಿಂದೊಪ್ಪಿದರು ಮರಡಿಯ ಮಠದಿಂದ ಶ್ರೀಗಳು ಗುಳೇದ ಗುಡ್ಡಕ್ಕೆ ದಯಮಾಡಿಸಿದರು. ಜನತೆಗೆ ಸಂತೋಷವೇ ಸಂತೋಷ ಆದರಲ್ಲೂ ಹೊಸಪೇಟೆಯ ಜನರಿಗೆ ಪ್ರತಿನಿತ್ಯವೂ ಶ್ರೀಗಳ ದರ್ಶನದಿಂದ ಹೊಸ ವಾತಾವರಣವೇ ನಿರ್ಮಾಣವಾಗಿ ಬಿಟ್ಟಂತಾಗಿದೆ. ಇದಲ್ಲದೆ ಪ್ರತಿವರ್ಷವೂ ಹಿಂದಿನ ಶ್ರೀಗಳ ಪುಣ್ಯಾರಾಧನೆಯ ದಿನ ವಿಧಿವತ್ತಾಗಿ ಅಯ್ಯಾಚಾರ ಲಿಂಗದೀಕ್ಷೆ ಮತ್ತು ಸಾಮೂಹಿಕ ವಿವಾಹಗಳು ಶ್ರೀಗಳ ನೇತೃತ್ವದಲ್ಲಿ ನಡೆಯುತ್ತಲಿವೆ ದಿನಂಪ್ರತಿ ಶಾಸ್ತ್ರ,ಶ್ರವಣ ಹಾಗೂ ಒಂದು ತಿಂಗಳ ಶರಣರ ಪುರಾಣ ಗಣಾರಾಧನೆ, ಮಹಾ ಪ್ರಸಾದ ವಿತರಣೆ ಹೀಗೆ ಸಮಾಜಕ್ಕೆ ದಾರಿದೀಪವಾಗಿ ವೀರಶೈವ ತತ್ವಗಳಿಂದ ಬೆಳಗುತ್ತ ತ್ರಿಕಾಲವೂ ಶಿವಪೂಜೆ, ಲಿಂಗಾರ್ಚನೆ ಮಾಡುತ್ತ ನಾನಾ ಬಗೆಯ ಅನುಭಾವಿಗಳೊಡನೆ ಸಂಭಾಷಿಸುತ್ತ ಹೊಸಪೇಟೆಯಲ್ಲಿ ಅನುಭವ ಮಂಟಪವೆಂಬಂತೆ ಈಗಿನ ಶ್ರೀಗಳ ಸ್ಥಾನ ಪರಿಶೋಭಿಸುತ್ತದೆ, ಈ ಸ್ಥಾನಕ್ಕೆ ಬಂದ ನಂತರವೂ ಶ್ರೀಗಳು ಮತ್ತೊಂದು ಸಲ ದಕ್ಷಿಣ ಕಾಶಿ ಕ್ಷೇತ್ರವೆಂದು ಹೆಸರಾದ ಮಹಾಕೂಟದ ರಮ್ಯ ನಿಸರ್ಗದ ಮಡಿಲಲ್ಲಿ ನಾಲ್ವತ್ತೆರಡು ದಿವಸಗಳ ವರೆಗೆ ಅಖಂಡ ಅನುಷ್ಠಾನಗೈದರು, ಪೂರ್ಣ ಯೋಗದ ಪ್ರಭೆಯಲ್ಲಿ ತಾವೇ ತಾವಾಗಿ ಆತ್ಮಜ್ಯೋತಿಯನ್ನು ಉದ್ದೀಪನಗೊಳಿಸಿದರು. ಆ ಏಕಾಂತ ಜೀವನದ ಅಮೃತಸಿದ್ಧಿಯನ್ನು ಸಮಾಜ ಜೀವಕ್ಕೆ ಅರ್ಪಿಸುತ್ತ ಲೋಕವೇ ನನ್ನ ಮನೆ ಮಾನವ ಕುಲವೇ ನನ್ನ ಕುಟುಂಬವೆಂದು ವೀರ ವಿರಕ್ತರಾಗಿ ಸದಾ ನಮ್ಮಗಳ ಮಧ್ಯ ಕುಲುಕುಲು ನಗುಮುಖದಿಂದ ಪ್ರಕಾಶಿಸುವ ಶ್ರೀ ಕಾಡಸಿದ್ಧರ (ರೇಣುಕಾರಾಧ್ಯರ) ನೋಟ ಪರುಷವಾಗಿದೆ. ಸದಾ ಸಮೃದ್ಧಿಯ ಶುಭ ಹಾರೈಕೆಯನ್ನೇ ಹೃದಯದಲ್ಲಿ ತುಂಬಿಕೊಂಡು ಆಶೀರ್ವಾದ ಮಾಡುವ ಕರಗಳಲ್ಲಿ ಕೂಡಾ ಪರುಷವಿದೆ. ಹಣೆ ಹಚ್ಚಿ ಮಣಿದ ಭಕ್ತರ ಕಾಮಿತಾರ್ಥಗಳನ್ನು ಪೂರೈಸಿ ಮನುಜತೆಯ ಮಹೋನ್ನತ ಕರ್ತವ್ಯವಾದ ನಿತ್ಯಾನಂದ ಸುಖ ಪ್ರಾಪ್ತಿಯ ಮಾರ್ಗಕ್ಕೆ ಕೊಂಡೊಯ್ಯುವ ಪರುಷ ಶಕ್ತಿ ಪಾದಗಳಲ್ಲಿಯೂ ಇದೆ. ಹೆಚ್ಚಾಗಿ ಮಾತನಾಡದವರಂತಿರ್ದರೂ ಶಿವಯೋಗ ಸಾಧನೆಯ ಸಿದ್ಧಿಯಲಿ ವಾಕ್‌ಪರುಷವು ಕೂಡಾ ಪ್ರಸಿದ್ಧಿಯಾಗಿದೆ ಇನ್ನು ದಾಸೋಹಂಭಾವದಿಂದ ಅಹಂಕಾರವೆಂಬುದೆನ್ನು ಸಮೂಲವಾಗಿ ಅರ್ಪಿಸಿ ಸೋಹಂ ಭಾವದಲ್ಲಿ ಸದಾ ತಾವೆ ತಾವಾಗಿ ಸರ್ವಾತ್ಮರೊಳು ಬೆರೆತು ಕಾಮಿತ ಭಕ್ತಸಮೂಹಕ್ಕೆ ತಮ್ಮ ಅಂತಃಕರುಣದ ಕೃಪೆ ತೋರುವ ಕೃಪಾ ಪರುಷವೂ ಅಮೋಘವಾಗಿದೆ, ಆತ್ಮದೃಷ್ಟಿಯೂ ಎನಿಸಿದ್ದು ಹೀಗೆ ಮಹಾಸ್ವಾಮಿಗಳು

CC-0. Jangamwadi Math Collection. Digitized by eGangotri

ಬಹು ಕಾಲದಿಂದಲೂ ನಿಜವಾದ ಧರ್ಮಾಚರಣೆಯನರಿಯದ ಮಬ್ಬುಕವಿದು ಕತ್ತಲೆಯಲಿ ಸಾಗಿದ ಸಮಾಜ ಜೀವನಕ್ಕೆ ಬೆಳಕು ತೋರುತ್ತ ನಡೆಯುತ್ತಿದ್ದಾರೆ. ಬುದ್ಧಿ ಜೀವಿಗಳ ಭವ ನಿವೃತ್ತಿಗಾಗಿಯೇ ಪರಶಿವನ ಚಿತ್‌ಶಕ್ತಿಯು ಧರೆಗಿಳಿದಂತೆ ಶಿವರೂಪಿಗಳಾಗಿ ಗುಳೇದಗುಡ್ಡದ ಸದ್ಭಕ್ತರ ಹೃದಯದಲ್ಲಿ ನಿಂತ ನೂತನ ಶ್ರೀಗಳಾದ ಕಾಡಸಿದ್ಧರ (ರೇಣುಕಾರಾಧ್ಯರ) ನಿತ್ಯ ಅನುಷ್ಠಾನದ ಕ್ರಿಯೆಯಲ್ಲಿ ಉಜ್ವಲ ತಪಸ್ಸಿನ ಕಿಡಿ ಇದೆ. ಪರಂಪರಾಗತ ಪೀಠದಲ್ಲಿ ಐತಿಹಾಸಿಕ ಸಚ್ಚಾರಿತ್ರ್ಯದ ಕೆಚ್ಚು ತುಂಬಿದೆ. ಪ್ರಭುದ್ದ ಶಕ್ತಿಯ ಶ್ರೀಮತ್ ಜ್ಞಾನದ ಗಾಂಭೀರ್ಯವಿದೆ. ಈ ಪ್ರಕಾರವಿದ್ದು ಶ್ರೀ ಶ್ರೀ ಶ್ರೀ ಶ್ರೀಮಜ್ಜಗದ್ಗುರು ಉಜ್ಜಯಿನಿ ಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು ೧೦೦೮ ಶಾಖಾನುವರ್ತಿಗಳಾದ ಗುಳೇದಗುಡ್ಡದಲ್ಲಿಯ ಶ್ರೀ ಷಟ್‌ಸ್ಥಲ ಬ್ರಹ್ಮ ಕಾಡಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು ಹತ್ತನೆಯ ಪೀಠದವರಾಗಿ ಗುರು ಪರಂಪರೆಯನ್ನು ಬೆಳಗಿಸುತ್ತ ಬಂದಿದ್ದಾರೆ. ಅವರ ಅಮೃತಸಿದ್ಧಿಯ ಅಭಯ ವರದ ಹಸ್ತ ಸದಾ ನಾಡಿನೇಳ್ಗೆಗಾಗಿ ಸಮಾಜದುದ್ಧಾರಕ್ಕಾಗಿ ಶ್ರಮಿಸುತ್ತಲೇ ಇದೆ. ಅದರಂತೆ ಅವರ ಚಾರಿತ್ರ್ಯ ಲೇಖನಕ್ಕೆ ಮಂಗಲಾಶೀರ್ವಾದ ಬೇಡಿ ಮುಗಿಸುವೆ.

ಓಂ ಶಾಂತಿ ಶಾಂತಿ ಶಾಂತಿಃ



CC-0. Jangamwadi Math Collection. Digitized by eGangotri

# ಮಂಗಲಾರ್ಪಣ

ಮಾಗಿಸಿ ತಂದಿಹೆ ತಂದೆ ನಿಮ್ಮ ದಿವ್ಯ ಚರಿತಾಮೃತ
ಜಗದಾದಿ ಸೂತ್ರಧಾರಿಯಾದ ನಿಮ್ಮ ಶಿರಿಯಡಿಗರ್ಪಿಸಲು
ನನ್ನದೆಂಬುವದು ಇದರೊಳಿನಿತೂ ಇಲ್ಲ,
ಮುನ್ನ ಗುರುಲಿಂಗೆ ಅರ್ಪಿಸಿಹೆ ನಾನೆಲ್ಲ
ಹೃದಯ ಮಂದಿರದಿ ನೀನೊರೆದ ತೆರನಾಗಿ ಬರೆದ
ಮುಂದದಿ ಮುಗಿದ ಈ ಕೃತಿಗೆ ದೈವಿ ಪ್ರಜ್ಞೆ ನಿಮ್ಮದೆಂದ

ಓದುವವರಿಗೆ ಆಲಿಸುವವರಿಗೆ
ಮತ್ತಿದನು ಪೂಜಿಸುವವರಿಗೆ
ಸಕಲ ಸೌಭಾಗ್ಯವನ್ನಿತ್ತು
ಮಂಗಲಕೆ ಮಹಾ ಮಂಗಳವನಿತ್ತು
ಸದಾ ರಕ್ಷಿಸೈ ಶ್ರೀ ಕಾಡಶಿದ್ಧೇಶಾ

SRI JAGADGURU VISHWARADHYA
JNANA SIMHASAN JNANAMANDIR
LIBRARY.
Jangamwadi Math, VARANASI
Acc. No. 28??2
718



CC-0. Jangamwadi Math Collection. Digitized by eGangotri

